# ಡಾ.ರಾಗೌ ರ ಕಾವ್ಯಗಳಲ್ಲಿ ಸಾಮಾಜಿಕ ಚಿಂತನೆ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್(ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.

ನೋಂದಣಿ ಸಂಖ್ಯೆ: ೧೬೧೨೦೧೩೦೦೫



೨೦೧೬-೧೭

# ಡಾ.ರಾಗೌ ರ ಕಾವ್ಯಗಳಲ್ಲಿ ಸಾಮಾಜಿಕ ಚಿಂತನೆ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್(ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.

ನೊಂದಣಿ ಸಂಖ್ಯೆ: ೧೬೧೨೦೧೩೦೦೫



Kannada University Logo

೨೦೧೬-೧೭

# ಪರಿವಿಡಿ

# ಅಧ್ಯಾಯ-೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕಾವ್ಯ ಕಟ್ಟುವ ಕಲೆ ಸೃಜನಾತ್ಮಕವಾದುದು. ಅದು ನಿತ್ಯ ನಿರಂತರವಾಗಿ ನಡೆಯುತ್ತಾ ಬಂದಿದೆ. ಆಧುನಿಕ ಸಾಹಿತ್ಯ ಸಂದರ್ಭ ಸಂಪ್ರದಾಯ, ಬದ್ಧ ಕಟ್ಟುಪಾಡುಗಳಿಂದ ಹೊರಬಂದು 'ಕಾವ್ಯ' ಕವಿಗಳ ಪ್ರಬಲ ಮಾಧ್ಯಮವಾಯಿತು. ಪಾಶ್ಚಾತ್ಯ ಪ್ರಭಾವ ಮತ್ತು ದೇಶಿಯ ಸತ್ವವನ್ನು ತನ್ನದಾಗಿಸಿಕೊಂಡ ಕವಿಗಳು ಕಾವ್ಯ ಸೃಷ್ಟಿಯಲ್ಲಿ ತೊಡಗಿದರು. ಕಾವ್ಯದ ವಸ್ತುವಿನಲ್ಲಿ ವೈವಿಧ್ಯತೆ ಕಾಣಿಸಿಕೊಂಡು ಜೀವಂತಿಕೆಯನ್ನು ಪಡೆದುಕೊಂಡಿತು. ಓದುಗರ ಮೆಚ್ಚುಗೆಗೂ ಪಾತ್ರವಾಯಿತು. ಹೀಗೆ ಹುಟ್ಟಿಕೊಂಡ ಸಾಹಿತ್ಯವನ್ನು ಧ್ಯೇಯ ಧೋರಣೆಗನುಗುಣವಾಗಿ ನವೋದಯ, ಪ್ರಗತಿಶೀಲ, ನವ್ಯ ಬಂಡಾಯ-ದಲಿತ ಎಂದು ವಿಭಾಗ ಮಾಡಿಕೊಂಡೆವು. 'ಶ್ರೀ' ಅವರಿಂದ ಮೊದಲುಗೊಂಡು ಇಂದಿನವರೆಗಿನ ಎಲ್ಲಾ ಕವಿಗಳು ಅಂದಂದಿನ ಕಾವ್ಯ ಚಳುವಳಿಗೆ ಸ್ಪಂದನೆ ನೀಡುತ್ತಾ ವಿಪುಲವಾದ ಕಾವ್ಯ ಕೃಷಿಗೆ ಕಾರಣರಾಗಿದ್ದಾರೆ.

ನವೋದಯ ನವ್ಯ ಮತ್ತು ಸಮನ್ವಯ ಮಾರ್ಗಗಳನ್ನೇ ಮುಂದುವರಿಸಿ ತಮ್ಮ ಅಸ್ಥಿತ್ವವನ್ನು ಕಾಪಾಡಿಕೊಂಡ ಕವಿಗಳು ಅನೇಕರಿದ್ದಾರೆ. ಇಂಥ ಯಾವ ವರ್ಗಕ್ಕೂ ಸೇರದೆ ಕಾವ್ಯತ್ವ ಮಾನವೀಯತೆ ಸಾಮಾಜಿಕತೆಯಂಥ ಅಂಶಗಳ ಆಧಾರದ ಮೇಲೆ ಸೃಜನಕ್ರಿಯೆಗೆ ತೊಡಗಿದವರು ಡಾ. ರಾಗೌ. ರಾಗೌ ಇಂಥದೇ ನಿರ್ದಿಷ್ಟ ಚಳುವಳಿಗೆ ಸೇರಿದವರೆಂದು ಹೇಳುವ ಅವಶ್ಯಕತೆ ಇರುವುದಿಲ್ಲ. ನವೋದಯ, ನವ್ಯದ ಚಿಂತನೆ ಬಗ್ಗೆ, ಬಂಡಾಯದ ಮಂಥನ, ಆಧುನಿಕೋತ್ತರ ಸ್ವಚ್ಛಂದ ಅಭಿವ್ಯಕ್ತಿ ಇವೆಲ್ಲವುಗಳ ಸಮ್ಮಿಲನ ರಾಗೌ ಅವರ ಕಾವ್ಯ. ರಾಗೌ ಅವರ ಕಾವ್ಯವನ್ನು ಮುಖ್ಯವಾಗಿ ಕಾವ್ಯ, ಕವಿತೆಗಳು, ಮುಕ್ತಕ, ಹನಿಗವನಗಳು (ಚುಟುಕುಗಳು ಎಂದು ವಿಭಾಗ ಮಾಡಿಕೊಳ್ಳಬಹುದು)

ಡಾ.ರಾಗೌ ಅವರ ಸಾಹಿತ್ಯ ಕೃಷಿ ಪ್ರಾರಂಭವಾದುದು ಕಾವ್ಯದ ರಚನೆಯಿಂದ. ರಾಗೌ ಕಾವ್ಯದಲ್ಲಿ 'ಅಂತರತಮ' ವನ್ನು ಶೋಧಿಸುವ ಮತ್ತು ಬದುಕಿನ ಗೂಢಗಳನ್ನು ವಿಸ್ಮಯಗಳನ್ನು ಹುಡುಕುವ 'ಮೌನ ಸಾಧಕ' ಎಂದು ಅರ್ಥಪೂರ್ಣವಾಗಿ ಗುರುತಿಸಲಾಗಿದೆ".

ಈ ನಿಬಂಧದಲ್ಲಿ 'ಡಾ ರಾಗೌ ಸಮಗ್ರ ಕಾವ್ಯ' ಎಂಬ ಕೃತಿಯನ್ನು ಆಧಾರವಾಗಿಟ್ಟುಕೊಂಡು ಅದರಲ್ಲಿರುವ ಒಟ್ಟಾರೆ ಕವಿತೆಗಳಲ್ಲಿ ಸಮಾಜಕ್ಕೆ ಸಂಬಂಧಿಸಿದ ಕವಿತೆಗಳನ್ನು ಆಯ್ದು, ಅವುಗಳನ್ನು ಅಧ್ಯಯನ ಮಾಡಿ, ಸಾಮಾಜಿಕ ಚಿಂತನೆಯ ನೆಲೆಯಲ್ಲಿ

ವಿಶ್ಲೇಷಣೆ ಮಾಡಿ, ಸಾಮಾಜಿಕ ಚಿಂತನೆ, ಸಾಮಾಜಿಕ ಕಾಳಜಿ, ಜವಾಬ್ದಾರಿ, ತತ್ವ, ನಿಲುವು, ಆಸಕ್ತಿ, ಒಲವುಗಳನ್ನು ಅನಾವರಣಗೊಳಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

"ಡಾ ರಾಗೌ ಅವರ ಕಾವ್ಯಗಳಲ್ಲಿ ಸಾಮಾಜಿಕ ಚಿಂತನೆ" ಎಂಬ ನಿಬಂಧವು ಮುಖ್ಯವಾಗಿ

ಆಧುನಿಕ ಕನ್ನಡ ಕಾವ್ಯದ ಹುಟ್ಟು ಮತ್ತು ಬೆಳವಣಿಗೆ

ರಾಗೌ ಅವರ ಬದುಕು ಬರಹ

ರಾಗೌ ಅವರ ಕಾವ್ಯಗಳ ಸಾಮಾಜಿಕ ಚಿಂತನೆ

ಗಳ ಕುರಿತ ವಿಷಯ ವ್ಯಾಪ್ತಿಯನ್ನು ಹೊಂದಿದೆ.

ಆಧುನಿಕ ಕನ್ನಡ ಕಾವ್ಯದ ಹುಟ್ಟಿಗೆ ಮೂಲ ಪ್ರೇರಣೆ ಪ್ರಭಾವ ಯಾವುದು? ಅದರ ಬೆಳವಣಿಗೆಯಲ್ಲಿ ಪಾಶ್ಚಾತ್ಯ ಸಾಹಿತ್ಯ ಮತ್ತು ಇಂಗ್ಲೀಷ್ ಶಿಕ್ಷಣದ ಪಾತ್ರ ಏನು? ಪರಂಪರೆಯಿಂದ ಹೊರಬಂದು ಹೇಗೆ ಹೊಸತನವನ್ನು, ಮೈಗೂಡಿಸಿಕೊಂಡಿತು. ಧ್ಯೇಯ ಧೋರಣೆಗಳಿಗೆ ಅನುಗುಣವಾಗಿ ನಡೆದ ವಿಭಾಗ ಕ್ರಮ, ಆಯಾ ಕಾಲಘಟ್ಟಗಳಿಗೆ ಸ್ಪಂದಿಸಿದ ಪ್ರಮುಖ ಕವಿಗಳು ಇತ್ಯಾದಿ ಅಂಶಗಳು ಚರ್ಚೆಯ ವಿಷಯಗಳಾಗಿವೆ.

ಕನ್ನಡ ಸಾಹಿತ್ಯ ಲೋಕದಲ್ಲಿ ಮಹತ್ತರ ಪಾತ್ರವಹಿಸಿರುವ, ಅಗಾಧ ಸೇವೆ ಸಲ್ಲಿಸುತ್ತಿರುವ ಡಾ ರಾಗೌ ಅವರ ಬದುಕನ್ನು ಕುರಿತಂತೆ ಅವರ ಹುಟ್ಟು, ಬೆಳವಣಿಗೆ, ವಿದ್ಯಾಭ್ಯಾಸ, ಕೃತಿಗಳು, ಸಂದ ಗೌರವ ಸನ್ಮಾನಗಳು, ಪಡೆದ ಪ್ರಶಸ್ತಿಗಳು, ಅವರಿಗಾದ ಸ್ಫೂರ್ತಿ, ಪ್ರೇರಣೆಗಳು ಮುಂತಾದ ಪ್ರಮುಖ ಅಂಶಗಳನ್ನು ಅನಾವರಣಗೊಳಿಸಲಾಗಿದೆ.

ಡಾ ರಾಗೌ ಅವರ ಕಾವ್ಯಗಳಲ್ಲಿ ಸಾಮಾಜಿಕ ಚಿಂತನೆ' ಈ ಅಧ್ಯಯನದ ಕೇಂದ್ರ ಭಾಗವಾಗಿದ್ದು, ಸಾಮಾಜಿಕ ನೆಲೆಯಲ್ಲಿ ಗುರುತಿಸಲಾದ

ರಾಜಕೀಯ ಸಂಬಂಧಿ ಕವಿತೆಗಳು.

ಜಾತಿ–ಮತ ಸಂಬಂಧಿ ಕವಿತೆಗಳು.

ಮಹಿಳೆ(ಸ್ತ್ರೀ)ಯರ ಕುರಿತ ಕವಿತೆಗಳು.

ಶ್ರೀ ಸಾಮಾನ್ಯರನ್ನು ಕುರಿತ ಕವಿತೆಗಳು

ಎಂಬ ಉಪ ಅಧ್ಯಾಯಗಳನ್ನಾಗಿ ಮಾಡಿಕೊಂಡು ವಿಶ್ಲೇಷಿಸಲಾಗಿದೆ.

ನಾವೆಲ್ಲರೂ ಒಂದು ನಿರ್ದಿಷ್ಟ ವ್ಯವಸ್ಥೆಯ ಸಮಾಜದಲ್ಲಿ ಬದುಕುತ್ತಿದ್ದೇವೆ. ಸಮಾಜ ಒಂದೇ ತೆರನಾಗಿರುವುದಿಲ್ಲ. ನಿರಂತರ ಬದಲಾವಣೆಗೆ ಒಳಗಾಗುತ್ತಿರುತ್ತದೆ. ಸಮಾಜವು ಅನೇಕ ಸ್ತರಗಳ, ಜಾತಿಗಳ, ಧರ್ಮಗಳ, ಪಂಗಡಗಳ, ಸಮುದಾಯಗಳ, ಬುಡಕಟ್ಟು ಜನರನ್ನು ಒಳಗೊಂಡ ಒಂದು ಬೃಹತ್ ಸಂಸ್ಥೆಯಾಗಿದೆ. ಒಂದು ಸಮಾಜದಲ್ಲಿ ಬದುಕುತ್ತಿರುವ ಸಾಹಿತಿ

ಆ‌ಗ್ಗಾ ಸಮಾಜದ ಒಂದು ಭಾಗವೇ ಆಗಿದ್ದು, ಅಲ್ಲಿನ ಜನರ ಮಾನಸಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳು ಆತನ ಅನುಭವದ ಪ್ರತ್ಯೇಕ ಅನುಭವಗಳಾಗಿವೆ. ಸಮಾಜ ಎಂದ ಕೂಡಲೇ ಮನುಷ್ಯ ಮತ್ತು ಪರಿಸರ ಪಾತ್ರ ಮುಖ್ಯವಾಗಿ ಕಾಣುತ್ತದೆ. ಸಮಾಜ–ಮನುಷ್ಯ, ಸಮಾಜ ಪ್ರಕೃತಿ , ಸಮಾಜ–ಜೀವನ ಇವುಗಳ ಸಂಬಂಧ ಬಹಳ ಮುಖ್ಯ. ಹಾಗೆಯೇ ಅಲ್ಲಿ ಜೀವನ ನಡೆಸುವ ಮನುಷ್ಯನು ಸಮಾಜ ಪರ ಧೋರಣೆಗಳನ್ನು ಹೊಂದಿರಬೇಕು ಎಂಬುದು ಅವಶ್ಯಕ ಅಂಶವಾಗಿದೆ. ಸಮಾಜದಲ್ಲಿ ಬದುಕು ಸಾಗಿಸುವ ಸಂದರ್ಭದಲ್ಲಿ ಮನುಷ್ಯ– ಮನುಷ್ಯ ಮತ್ತು ಮನುಷ್ಯ–ಪ್ರಕೃತಿ ನಡುವೆ ನಡೆಯುವ ಹೋರಾಟ ಬಹಳ ಮುಖ್ಯವಾಗುತ್ತದೆ. ಸ್ನೇಹ, ಸೌಹಾರ್ದತೆಯಿಂದ ಬದುಕಬೇಕಾದ ನರನು ಸ್ವಾರ್ಥ ಮತ್ತು ದುರಾಸೆಯಿಂದ ಹೊಟ್ಟೆಕಿಚ್ಚು ಪಡುತ್ತಾ ಇತರರನ್ನು ದೂಷಿಸುತ್ತಾ ಅಹಂಕಾರದಿಂದ ಮೆರೆವ ಮಾನವ ಸಮಾಜದಲ್ಲಿ ಪಡೆಯುತ್ತಿರುವ ಸ್ಥಾನ ಇತ್ಯಾದಿ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಸಮಾಜ ಮತ್ತು ನಾಡನ್ನು ಕಟ್ಟುವಲ್ಲಿ ವಿಭೂತಿ ಪುರುಷರು ಮತ್ತು ಮಹಾನ್ ವ್ಯಕ್ತಿಗಳು, ಆದರ್ಶ ಪುರುಷರ ಪಾತ್ರ ಗಮನಾರ್ಹವಾದುದು. ಅಹಿಂಸಾ ನೀತಿ, ಸರಳ ಬದುಕು, ಸಮಾನತೆಯ ತತ್ವ, ನಂಬಿಕೆ, ದುರ್ಬಲರ ಪರವಾದ ನಿಲುವು, ಇವು ದಟ್ಟ ಪ್ರಭಾವ ಬೀರಿವೆ. ಹಿರಿಯ ಚೇತನಗಳಿಂದ ರಾಗೌ ಅವರಿಗೆ ದೊರೆತ ಸ್ಫೂರ್ತಿ ಪ್ರೇರಣೆ, ಪ್ರಭಾವ ಇತ್ಯಾದಿ ವಿಚಾರಗಳು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ.

ಒಟ್ಟಾರೆಯಾಗಿ ಈ ನಿಬಂಧವು ಕಾವ್ಯದ ಹುಟ್ಟು ಬೆಳವಣಿಗೆ, ಡಾ.ರಾಗೌ ಅವರ ಪರಿಚಯ ಮತ್ತು ಅವರ ಕಾವ್ಯ ಚಿಂತನೆಯನ್ನು ಒಳಗೊಂಡಿದ್ದು, ಅವರ ಸೃಜನ ಶೀಲತೆ, ಔಚಿತ್ಯಕ್ಕೆ ತಕ್ಕ ಪ್ರತಿಕ್ರಿಯೆ, ಕಾಯಕ ನಿಷ್ಠೆ, ಕನ್ನಡ ನಿಷ್ಠೆ ಮುಂತಾದ ವಿಚಾರಗಳನ್ನು ಅನಾವರಣಗೊಳಿಸುತ್ತದೆ.

## ಅಧ್ಯಾಯ-2

# ಆಧುನಿಕ ಕನ್ನಡ ಕಾವ್ಯದ ಹುಟ್ಟು ಮತ್ತು ಬೆಳವಣಿಗೆ

ಪ್ರಾಚೀನ ಕನ್ನಡ ಸಾಹಿತ್ಯದಂತೆ ಆಧುನಕ ಕನ್ನಡ ಸಾಹಿತ್ಯವು ತನ್ನದೇ ಆದ ದೀರ್ಘ ಇತಿಹಾಸವನ್ನು ಹೊಂದಿದೆ. ಅದು ಕಾಲ, ದೇಶ, ಪರಿಸರ ಪರಿಸ್ಥಿತಿಗಳಿಗೆ ಅನುಗುಣವಾಗಿ ಬದಲಾಗುತ್ತಾ ರೂಪುಗೊಳ್ಳುತ್ತಾ ಬಂದಿದೆ. ಪ್ರಾಚೀನ ಸಾಹಿತ್ಯಕ್ಕೆ ಸಂಸ್ಕೃತದ ಪ್ರಭಾವ ದಟ್ಟವಾದಂತೆ ಹೊಸಗನ್ನಡ ಸಾಹಿತ್ಯದ ಮೇಲೆ ಪಾಶ್ಚಾತ್ಯರ ಅದರಲ್ಲೂ ಮುಖ್ಯವಾಗಿ ಇಂಗ್ಲೀಷರ ಪ್ರಭಾವ ಅಗಾಧವಾದುದು. ತನ್ನದೇ ಆದ ಪ್ರಾಚೀನ ಗತಿಯಲ್ಲಿ ಸಾಗಿದ್ದ ಸಾಹಿತ್ಯ ಪರಂಪರೆ ಹೊಸ ಸಾಹಿತ್ಯದ ಪ್ರಭಾವವನ್ನು ತನ್ನೊಂದಿಗೆ ಸೇರಿಸಿಕೊಂಡು ತನ್ನ ವ್ಯಾಪ್ತಿಯಲ್ಲಿ ಹಿಗ್ಗಿಸಿಕೊಳ್ಳುವ ಪ್ರಯತ್ನ ನಡೆಸಿತು.

೧೯೨೧ ರಲ್ಲಿ ಪ್ರೊ. ಬಿ.ಎಂ ಶ್ರೀ ಅವರ "ಇಂಗ್ಲೀಷ್ ಗೀತಗಳು" ಪ್ರಕಟವಾಯಿತುಇಲ್ಲಿಗೆ ಆಧುನಿಕ ಸಾಹಿತ್ಯದ ಹೆದ್ದಾರಿ ತೆರೆಯಿತು ಎನ್ನಬಹುದು. ಈ ಹೊತ್ತಿಗಾಗಲೇ ಆಧುನಿಕ ಸಾಹಿತ್ಯದ ಅರುಣೋದಯವು ಮುದ್ದಣ್ಣನ ' ರಾಮಾಶ್ವಮೇದ', ಎಂ.ಎಸ್ ಪುಟ್ಟಣ್ಣನವರ ಕಾದಂಬರಿ ' ಮಾಡಿದ್ದುಣ್ಣೋ ಮಹಾರಾಯ' ಉತ್ತರ ಕನ್ನಡ ಜಿಲ್ಲೆಯಲ್ಲಿ ರಚಿತವಾದುದೆಂದು ಹೇಳಲಾದ ' ಇಗ್ಗಪ್ಪನ ಹೆಗ್ಗಡೆ ಪ್ರಹಸನ' ಮೊದಲಾದ ಕೃತಿಗಳಲ್ಲಿ ಕಂಡಿತು. ಆದರೆ ' ಇಂಗ್ಲೀಷ್ ಗೀತೆಗಳ' ಮನೋಧರ್ಮ ಅದರ ಪ್ರಯೋಗಶೀಲತ್ವ, ಪ್ರಭಾವ ಇವನ್ನು ಪರಿಗಣಿಸಿದಾಗ ಅಧುನಿಕ ಕನ್ನಡ ಸಾಹಿತ್ಯ ಈ ಕೃತಿಯಲ್ಲಿ ತನ್ನ ಉದಯವನ್ನು ಸಾರಿ ಹೇಳಿತು ೧೯ನೇ ಶತಮಾನದ ಉತ್ತರಾರ್ಧದಲ್ಲಿಯೇ 'ಆಧುನಿಕ ಕನ್ನಡ ಸಾಹಿತ್ಯದ' ಆರಂಭವಾಗಿ ೨೦ನೇ ಶತಮಾನದಲ್ಲಿ ಹುಲುಸಾಗಿ ಸಾಗಿ ಅಂದಿನ ವಸಾಹತುಶಾಹಿಯ ಸಂಸ್ಕೃತಿ ಪರಿಣಾಮದ ಫಲದಿಂದ ಪ್ರವೇಶವಾದ ಶಿಕ್ಷಣ ಪದ್ಧತಿ, ಮುದ್ರಣ ಆಡಳಿತ ವ್ಯವಹಾರ ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ, ವಿಜ್ಞಾನ, ತಂತ್ರಜ್ಞಾನ, ಇಂಗ್ಲಿಷ್ ಸಾಹಿತ್ಯ, ಕೈಗಾರಿಕೀರಣ, ಸಂಸ್ಕೃತೀಕರಣ, ಅಂದಿನ ಆಂಗ್ಲ ಕ್ರೈಸ್ತ ಮಿಶನಗರಿಗಳು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಉಂಟುಮಾಡಿದ ಎಚ್ಚರ ಇವೆಲ್ಲವೂ ಭಾರತೀಯ ಬದುಕಿನಲ್ಲಿ ಬದಲಾವಣೆಯನ್ನು ತಂದವು ವ್ಯಕ್ತಿಯ ಸಮಷ್ಟಿ ಬದುಕಿನಲ್ಲಿ ಹೊಸ ದೃಷ್ಟಿ ದೋರಣೆ, ಸ್ವಾತಂತ್ರ್ಯ ಪ್ರಜ್ಞೆ, ರಾಷ್ಟ್ರೀಯ ಮನೋಧರ್ಮ, ಸಾಂಸ್ಕೃತಿಕ ಪುನರುಜ್ಜೀವನ, ವೈಜ್ಞಾನಿಕ ಮನೋಭಾವನೆ, ಪ್ರಾದೇಶಿಕ ಮತ್ತು ಭಾರತೀಯ ಭಾವೈಕ್ಯತೆ, ಪ್ರಜಾಪ್ರಭುತ್ವದ ಆಸ್ಥೆ, ವಿಶ್ವಪ್ರಜ್ಞೆ, ಸರ್ವೋದಯ, ಸಮಾನತೆ ಮತ್ತು ಮೊದಲಾದ ಹೊಸ ಆಶೋತ್ತರಗಳು ಕಾಣಿಸಿಕೊಳ್ಳುವ ಮೂಲಕ ಆಧುನಿಕ ಕನ್ನಡ ಸಾಹಿತ್ಯದ ಉದಯಕ್ಕೆ ಭದ್ರ ಬುನಾದಿಯಾದವು. ಇದರ ಪರಿಣಾಮವಾಗಿ ಸಾಹಿತ್ಯ ದೈವ ಕೇಂದ್ರದಿಂದ ಮನುಷ್ಯ ಮತ್ತು

ದೇವರ ಸಂಬಂಧ ಮಾತ್ರವಲ್ಲದೆ ಇತರ ಸಂಬಂಧಗಳು ಅಷ್ಟೇ ಮೌಲ್ಯಾಯುತವಾದವು ಎಂಬುದನ್ನು ಮನಗಂಡು ಅವನ ಭಾವನೆಗಳು, ಆಸೆಗಳು, ಕನಸುಗಳು ಎಲ್ಲ ಕಾವ್ಯದ ವಸ್ತುವಾದವು. ಇಂಗ್ಲೀಷ್ ವಿದ್ಯಾಭ್ಯಾಸ ಕ್ರಮದಿಂದ ಹೊಸ ವಿಷಯಗಳ ಅಧ್ಯಯನ ಸಾಧ್ಯವಾಯಿತು. ಚಾರಿತ್ರಿಕ ಪ್ರಜ್ಞೆ, ಸ್ವಾತಂತ್ರ್ಯ ಪೇಮ, ಪ್ರಜಾಪ್ರಭುತ್ವ ಶ್ರದ್ಧೆ ಇವು ಜನಮನದಲ್ಲಿ ಬೇರೂರಿದವು. ಅನೇಕರು ಪಾಶ್ಯಾತ್ಯ ವಿದ್ಯಾಬ್ಯಾಸದಿಂದ ಸಮಾಜದಲ್ಲಿನ ಅನಿಷ್ಟ ಪದ್ದತಿಗಳನ್ನು ಖಂಡಿಸಲು ಮತ್ತು ಪ್ರಶ್ನಿಸಲು ಸಾಧ್ಯವಾಯಿತು. ಇಂಗ್ಲೆಂಡಿನ ಚರಿತ್ರೆ ಇವುಗಳ ಅಧ್ಯಯನದಿಂದ ಎಲ್ಲವನ್ನು ಪ್ರಶ್ನಿಸುವ, ವಿಶ್ಲೇಷಿಸುವ ಮನೋಧರ್ಮದ ಪರಿಚಯವಾಯಿತು, ಸಾಹಿತ್ಯ, ಜೀವನಗಳ ಸಂಬಂಧ ಎಷ್ಟು ವ್ಯಾಪಕವಾದುದು, ನಿಕಟವಾದುದು, ಹೇಗೆ ಸಾಹಿತ್ಯ ಸಮಾಜದ ಮತ್ತು ವ್ಯಕ್ತಿಯ ಜೀವನದ ಎಲ್ಲ ಸಂವೇದನಗಳಿಗೆ ಸ್ಪಂದಿಸುತ್ತದೆ ಎಂಬುದರ ದರ್ಶನವಾಯಿತು. “ವಚನಗಳಲ್ಲಿ ದಾಸ ಸಾಹಿತ್ಯದಲ್ಲಿ ಭಾವಗೀತೆಯ ಅಂಶ ಕನ್ನಡದಲ್ಲಿ ಪ್ರಕಟವಾಗಿತ್ತು. ಆದರೆ ಇಂಗ್ಲೀಷ್ ಭಾಷೆಯ ಭಾವಗೀತೆಯ ಸಂಪತ್ತು ರೋಮಾಂಚನ ಗೊಳಿಸುವಂತದು. ಮನುಷ್ಯನ ಅತಿ ಸೂಕ್ಷ್ಮ ಭಾವನೆಗಳು, ಕನಸುಗಳು, ನೋವು, ನಿರಾಸೆಗಳು ಎಲ್ಲ ಉತ್ಕೃಷ್ಟ ಕಾವ್ಯದಲ್ಲಿ ಅಭಿವ್ಯಕ್ತಗೊಂಡ ಆ ಕಾವ್ಯದ ಅಭ್ಯಾಸ ಕನ್ನಡಿಗನ ಪಾಲಿಗದು ವಿಶಿಷ್ಟ ಅನುಭವವಾಯಿತು.”[೧]

ಆಧುನಿಕ ಕನ್ನಡ ಸಾಹಿತ್ಯದ ಹುಟ್ಟಿಗೆ ಪಾಶ್ಚಾತ್ಯ ಪ್ರಭಾವ ಮಾತ್ರವಲ್ಲದೆ ದೇಶೀಯ ಪ್ರಭಾವಗಳೂ ಕೂಡ ಪರಿಣಾಮಕಾರಿ ಪಾತ್ರ ವಹಿಸಿವೆ ಭಾರತದ ಸ್ವಾತಂತ್ರ್ಯ ಹೋರಾಟ ನಮ್ಮ ನಾಡು, ಸಂಸ್ಕೃತಿಗಳಲ್ಲಿ ಅಭಿಮಾನವನ್ನು ಮೂಡಿಸಿತು. ಅನ್ಯ ಭಾಷೆಯ ಬಳಕೆ ಅವಶ್ಯಕವಾಯಿತು. ಸ್ವಾತಂತ್ರ್ಯದ ಹೋರಾಟ, ದೇಶ ಪ್ರೇಮ ಗೀತೆಗಳ ರಚನೆಗೆ ಪ್ರೋತ್ಸಾಹ ಕೊಟ್ಟಿತು, ಪಾಶ್ಚಾತ್ಯ ವಿದ್ವಾಂಸರು ಭಾರತದ ಚರಿತ್ರೆ, ತತ್ವಶಾಸ್ತ್ರ, ಇತಿಹಾಸಗಳಲ್ಲಿ ವಿಶಿಷ್ಟ ಆಸಕ್ತಿವಹಿಸಿ ಸಂಶೋದನೆ ನಡೆಸಿದರು. ಅವರ ಕೃತಿಗಳು ಕನ್ನಡಿಗರಿಗೆ ತಮ್ಮ ಸಾಂಸ್ಕೃತಿಕ ಸಂಪತ್ತನ್ನು ಅಧ್ಯಯನ ಮಾಡಲು ದಾರಿದೀಪಗಳಾದವು. ಹೀಗೆ ಪಾಶ್ಚಾತ್ಯ ಮತ್ತು ದೇಶೀಯ ಪ್ರೇರಣೆ ಪ್ರಭಾವಕ್ಕೊಳಗಾಗಿ ಒಂದು ಸ್ಪಷ್ಟ ರೂಪ ಪಡೆದ ಆಧುನಿಕ ಕನ್ನಡ ಸಾಹಿತ್ಯವನ್ನು ಮುಖ್ಯ ಪ್ರವೃತ್ತಿಗಳಿಗೆ ಅನುಗುಣವಾಗಿ ನವೋದಯ, ಪ್ರಗತಿ ಶೀಲ, ನವ್ಯ, ಬಂಡಾಯ ಮತ್ತು ದಲಿತ ಸಾಹಿತ್ಯವೆಂದು ಸಾಮಾನ್ಯವಾಗಿ ವಿಂಗಡಿಸಲಾಗುತ್ತದೆ.

ನವೋದಯದ ಕಾಲಘಟ್ಟದ ಆರಂಭವನ್ನು ವಿದ್ಯುಕ್ತವಾಗಿ ಉದ್ಘಾಟಿಸಿದ ಕೃತಿಯೆಂದರೆ ಬಿ. ಎಂ. ಶ್ರೀ ಯವರ ‘ಇಂಗ್ಲೀಷ್ ಗೀತೆಗಳು’ ಇದರಲ್ಲಿ ಇಂಗ್ಲೀಷ್ ರೋಮ್ಯಾಂಟಿಕ್ ಸಂಪ್ರದಾಯದ ಕವಿಗಳಾದ ವರ್ಡ್ಸ್‌ವರ್ತ್, ಪಲ್ಲಿ, ಬರ್ನ್ಸ್, ಬ್ರೌನಿಂಗ್, ಟೆನಿಸನ್, ಸ್ಕಾಟ್, ಬೈರನ್, ಹಾಗೂ ಷೇಕ್ಸ್‌ಪಿಯರ್ ಮುಂತಾದವರ ಕವನಗಳು ಸೇರಿವೆ. ಅದೇ ಸಮಯಕ್ಕೆ

ಗೋವಿಂದ ಪೈ, ಡಿ.ವಿ ಗುಂಡಪ್ಪ, ಮಾಸ್ತಿ ವೆಂಕಟೇಶ್ ಅಯ್ಯಂಗರ್, ದ.ರಾ ಬೇಂದ್ರೆ, ಕೆ.ವಿ ಪುಟ್ಟಪ್ಪ, ಪು.ತಿ.ನರಸಿಂಹಚಾರ್, ವೀ. ಸೀತಾರಾಮಯ್ಯ, ಕೆ.ಎಸ್ ನರಸಿಂಹಸ್ವಾಮಿ, ಗೋಪಲ ಕೃಷ್ಣ ಅಡಿಗ, ಚನ್ನವೀರ ಕಣವಿ, ಜಿ.ಎಸ್ ಶಿವರುದ್ರಪ್ಪ, ಜೆ.ಪಿ ರಾಜರತ್ನಂ, ತೀ.ನಂ ಶ್ರೀಕಂಠಯ್ಯ, ವಿ.ಕೃ ಗೋಕಾಕ್ ಇನ್ನು ಮುಂತಾದ ಹಲವಾರು ಪ್ರತಿಭಾವಂತ ಕವಿಗಳ ಪಡೆ ಕಾವ್ಯ ಪ್ರಕಾರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದರು ಆಶಾವಾದಿತನ, ಜೀವನೋತ್ಸಹ, ಪ್ರಕೃತಿ ಪ್ರೇಮ, ಆದ್ಯಾತ್ಮಿಕತೆ, ಆದರ್ಶವಾದ ಮನೋವೃತ್ತಿ ಮತ್ತು ಕನಸುಗಾರಿಕೆ ಮುಂತದ ಧೋರಣೆಗಳನ್ನು ಈ ಸಾಹಿತ್ಯ ಹೊಂದಿತ್ತು. ಮನುಷ್ಯನ ಭಾವನೆಗಳು, ಆಸೆಗಳು, ಕನಸುಗಳು ಪ್ರಕೃತಿಯಲ್ಲಿ ಬೆರಗು, ಕುತೂಹಲ, ಊಹೆ ಮನುಷ್ಯ ಮನುಷ್ಯರ, ಸಂಬಂಧ, ಸಮಜದಲ್ಲಿ ಮನುಷ್ಯ, ಕುಟುಂಬದಲ್ಲಿ ಮನುಷ್ಯ, ಸ್ನೇಹ ಪ್ರೀತಿ, ದ್ವೇಷ ಹೀಗೆ ಎಲ್ಲವೂ ಇದರ ವಸ್ತುವಾಗಿದ್ದು "ಇಹಲೋಕದ ಬಾಳು ಪರಲೋಕಕ್ಕೆ ದಾರಿ ಮಾತ್ರವಲ್ಲ ಈ ಲೋಕದ ಬಾಳಿನಲ್ಲೇ ಇದಕ್ಕೆ ತೀವ್ರ ಆಸಕ್ತಿ"ಎಂಬ ಮೌಲ್ಯಗಳಿಗೆ ಒತ್ತು ನೀಡಿತ್ತು.

ನವ್ಯ ಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯದ ಒಂದು ಬಹುಮುಖ್ಯ ಸಾಹಿತ್ಯ ಪಂಥ. "ಕನ್ನಡ ನವ್ಯ ಸಾಹಿತ್ಯದ ಹರಿಕಾರ" ಎಂದು ಹೆಸರು ಪಡೆದ ಕವಿ ಎಂ.ಗೋಪಾಲಕೃಷ್ಣ ಅಡಿಗರು ೧೯೫೨ ರಲ್ಲಿ ಪ್ರಕಟವಾದ ತಮ್ಮ "ನಡೆದ ಬಂದ ದಾರಿ" ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ನವ್ಯ ಕಾವ್ಯದ ಅನಿವಾರ್ಯತೆಯನ್ನು ಕುರಿತು ಹೇಳಿದ್ದಾರೆ.

ನವ್ಯ ಸಾಹಿತ್ಯ ಮನುಷ್ಯನ ಆತ್ಮನಿಷ್ಟತೆ, ಮಾನಸಿಕ ಸಂಘರ್ಷ, ಭಯ, ಬೀಭತ್ಸತೆ, ದ್ವಂದ್ವತೆ, ಸಿನಕುತನ, ಏಕಾಂಗಿತನ, ನಿರಾಸೆ, ಪರಕೀಯತೆ ಇನ್ನು ಮುಂತಾದ ಸಂಕೀರ್ಣತೆಗಳ ಮುಖವಾಣಿಯಿತು. ವಾಸ್ತವದ ತೀವ್ರ ಹಂಬಲದ ಮೂಲಕ ನಾಸ್ತಿಕತೆಗೆ ಹೆಚ್ಚು ಒತ್ತು ಕೊಟ್ಟಿತು. ಭಾಷೆಯ ಸೂಕ್ಷ್ಮತೆ, ಕಲಾತ್ಮಕತೆ, ವ್ಯಂಗ್ಯ, ಧ್ವನಿ, ಸಾಂಕೇತಿಕತೆಗಳನ್ನು ಬಳಸಿ, ಆ ಮೂಲಕ ಬದುಕಿನ ಸಂಕೀರ್ಣನುಭವಗಳನ್ನು ಶೋಧಿಸುವ ಪ್ರಯತ್ನ ಮಾಡಿದರು.

ದಲಿತ-ಬಂಡಾಯ ಸಾಹಿತ್ಯವು ಒಂದು ಚಳುವಳಿಯಾಗಿ ಆರಂಭವಾದದ್ದು ೧೯೭೦ ರ ಉತ್ತರಾರ್ಧದಲ್ಲಿ ದಲಿತ-ಬಂಡಾಯ ಸಾಹಿತ್ಯಕ್ಕೆ ಮಾರ್ಕ್ಸ್‌ವಾದ, ಲೋಹಿಯವಾದ, ಅಂಬೇಡ್ಕರ್‌ವಾದ, ಹಾವನೂರರ ವರದಿ, ಬಸವಲಿಂಗಪ್ಪನವರ ಬೂಸಾ ಪ್ರಕರಣ, ಜಾತಿ ವಿನಾಶ ಸಮ್ಮೇಳನ ಮುಂತಾದ ಸಾಹಿತ್ಯೇತರ ಅಂಶಗಳು ಮತ್ತು ತೆಲುಗಿನ ದಿಗಂಬರ ಕಾವ್ಯ, ಮರಾಠಿ ದಲಿತ ಸಾಹಿತ್ಯ ಚಳುವಳಿ ಮತ್ತು ಆಫ್ರಿಕಾದ ಕಪ್ಪು ಸಾಹಿತ್ಯ ಚಳುವಳಿ ಮುಂತಾದ ಅಂಶಗಳು ಪ್ರಭಾವ ಬೀರಿದವು.

ದಲಿತ, ಬಂಡಾಯ ಸಾಹಿತ್ಯದಲ್ಲಿ ಜನಪ್ರಿಯವಾದ ಸಾಹಿತ್ಯ ಪ್ರಕಾರಗಳೆಂದರೆ ಕಥೆ ಮತ್ತು ಕಾವ್ಯ, ರೊಚ್ಚು ಆವೇಶಗಳೊಂದಿಗೆ ಸಾಹಿತ್ಯ ಪ್ರಕಟವಾಗಿ ಕನ್ನಡ ಕಾವ್ಯ ಲೋಕವನ್ನೇ ಅಲ್ಲಾಡಿಸಿತು.

ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯ ಕೂಡ ಗಮನಾರ್ಹ ಬೆಳವಣಿಗೆಯನ್ನು ಹೊಂದುತ್ತಿರುವುದನ್ನು ಗಮನಿಸಬಹುದು. ಮಹಿಳೆಯರ ಕಾವ್ಯದಲ್ಲಿಯೂ ಭಾವಗೀತಾತ್ಮಕತೆ ಬದುಕಿನ ಪ್ರೀತಿ ಹೃದಯದ ಕನಸುಗಳು, ಎಲ್ಲವುಗಳ ಮುಕ್ತ ಅಭಿವ್ಯಕ್ತಿಯನ್ನು ಕಾಣಬಹುದು.

ಸಾಹಿತ್ಯದ ಉದ್ದೇಶ, ಧ್ಯೇಯ, ಧೋರಣೆಯ ಆಧಾರದ ಮೇಲೆ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಎಂದು ಗುರುತಿಸಲಾಗಿದ್ದು, ಅದರದೇ ಆದ ತತ್ವ ಚಿಂತನೆ, ವಿಚಾರಗಳನ್ನು ಒಳಗೊಂಡ ಕಾವ್ಯವನ್ನು ಅಂದಂದಿನ ಕವಿಗಳು ರಚಿಸುತ್ತಲೇ ಇದ್ದಾರೆ. ಅಷ್ಟೇ ಅಲ್ಲ, ಯಾವ ಒಂದು ತತ್ವ ಸಿದ್ಧಾಂತಕ್ಕೂ ಅಂಟಿಕೊಳ್ಳದ ಅನೇಕ ಕವಿಗಳು ತಾವು ಕಂಡುಂಡ ಅನುಭವವೆಲ್ಲವನ್ನು ಕಾವ್ಯವಾಗಿಸುತ್ತಲೇ ಇದ್ದಾರೆ. ಹೀಗೆ ಪಾಶ್ಚಾತ್ಯ ಪ್ರಭಾವ ಮತ್ತು ದೇಶೀಯ ಸಂವೇದನೆಯಿಂದ ಪ್ರೇರಣೆಗೊಂಡ ಆಧುನಿಕ ಕನ್ನಡ ಕಾವ್ಯ ಅಂದಿನಿಂದ ಮೊದಲುಗೊಂಡು ಇಂದಿನವರೆಗೂ ತನ್ನದೇ ಆದ ವಿಶಿಷ್ಟ ವಸ್ತು ವೈವಿಧ್ಯತೆಯಿಂದ ಕೂಡಿ ಬೆಳೆಯುತ್ತಲೇ ನಿರಂತರ ಬದಲಾವಣೆಗೆ ಒಳಗಾಗುತ್ತಿದ್ದು ಹೊಸ ಸೃಷ್ಟಿ ಮತ್ತು ಚೈತನ್ಯಕ್ಕೆ ಕಾರಣವಾಗುತ್ತಿದೆ.

**ಅಡಿ ಟಿಪ್ಪಣಿಗಳು:**

**ಹೊಸಗನ್ನಡ ಸಾಹಿತ್ಯ ಚರಿತ್ರೆ–ಎಲ್.ಎಸ್. ಶೇಷಗಿರಿರಾವ್ ,ಪುಟ ಸಂಖ್ಯೆ: ೬೩,**

**ಅಂಕಿತ ಪ್ರಕಾಶನ.–೨೦೦೮, ಬೆಂಗಳೂರು**

# ಅಧ್ಯಾಯ–೩

## ಡಾ ರಾಗೌ ಅವರ ಬದುಕು–ಬರಹ

ಡಾ. ರಾಗೌ ಕನ್ನಡ ಸಾಹಿತ್ಯ–ಸಂಸ್ಕೃತಿ ಚಿಂತನೆಯ ಸಂದರ್ಭದಲ್ಲಿ ಒಂದು ಮುಖ್ಯವಾದ ಹೆಸರು ಕನ್ನಡ ಸಾಹಿತ್ಯಕ್ಕೆ ಅವರ ಸೇವೆ ಅಗಾಧವಾದದ್ದು ಮತ್ತು ತುಂಬಾ ಮೌಲಿಕವಾದುದಾಗಿದೆ. ರಾಗೌರವರು ಕಾವ್ಯ, ನಾಟಕ, ವಿಮರ್ಶೆ, ಸಂಶೋಧನೆ, ಗ್ರಂಥ ಸಂಪಾದನೆ, ಜಾನಪದ, ಶಿಶುಸಾಹಿತ್ಯ, ಸಂಪಾದನೆ ಹೀಗೆ ಹಲವು ಪ್ರಕಾರಗಳಲ್ಲಿ ಕೆಲಸ ಮಾಡುತ್ತಾ ಬಂದಿರುವ ರಾಗೌ ತಾವು ಕೈ ಹಚ್ಚಿದ ಎಲ್ಲ ಕ್ಷೇತ್ರಗಳಲ್ಲಿ ಶಿಸ್ತು ಬದ್ಧವಾಗಿ ವಿವೇಕ ಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು ಗಣನೀಯವಾದ ಸಾಧನೆ ಮಾಡಿದ್ದಾರೆ. ಬರಹ ಇಂದು ಅವರಿಗೆ ಕರಗತ ವಿದ್ಯೆ.

**ಜನನ:–** ಸಕ್ಕರೆಯ ನಾಡು ಎಂದೇ ಖ್ಯಾತವಾಗಿರುವ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಈರೇಗೌಡನ ದೊಡ್ಡಿ ಎಂಬ ಗ್ರಾಮದಲ್ಲಿ ಒಂದು ಸಾಮಾನ್ಯ ಹಳ್ಳಿಯ ಸಾಮಾನ್ಯ ರೈತ ಕುಟುಂಬದಲ್ಲಿ ರಾಗೌ ಹುಟ್ಟಿದರು. ೧೯೪೨ರ ಏಪ್ರಿಲ್ ೨ ಅವರ ಜನ್ಮ ದಿನಾಂಕ. ತಂದೆ– ಮಾಸ್ತೀಗೌಡ, ತಾಯಿ ನಿಂಗಮ್ಮ, ತಂದೆತಾಯಿಗಳೂ ಕುಟುಂಬದವರೂ ಇಟ್ಟ ಹೆಸರು ರಾಮೇಗೌಡ. ಪಡೆದ ವಿದ್ಯೆಯಿಂದ ಡಾ ರಾಮೇಗೌಡ, ಕಾವ್ಯನಾಮವಾಗಿ 'ರಾಗೌ' ಎಂದು ಪ್ರಸಿದ್ಧವಾಗಿದೆ. ಹುಟ್ಟಿದ ವರ್ಷದೊಳಗೆ ತಾಯಿಯನ್ನು ನಂತರದಲ್ಲಿ ತಂದೆಯನ್ನೂ ಕಳೆದುಕೊಂಡು, ಅವಿಭಕ್ತ ಕುಟುಂಬದ ಆಸರೆಯೊಂದಿಗೆ ದೊಡ್ಡಪ್ಪ, ಚಿಕ್ಕಪ್ಪಂದಿರ ಪ್ರೀತಿಯಲ್ಲಿ ಬೆಳೆದರು.

ರಾಗೌ ಅವರ ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸ ಹುಟ್ಟಿದೂರಿಗೆ ಸಮೀಪದ ಬೆಸಗರ ಹಳ್ಳಿಯಲ್ಲಿ ನಡೆದಿದೆ. ಪ್ರೌಢಶಾಲಾ ವ್ಯಾಸಂಗ ತಾಲ್ಲೂಕು ಕೇಂದ್ರವಾದ ಮದ್ದೂರಿನಲ್ಲಿ ಆಗಿದೆ. ರಾಗೌ ಎಲ್ಲೆಸ್ ಮುಗಿದು ಪ್ರೌಢಶಾಲಾ ಶಿಕ್ಷಣಕ್ಕಾಗಿ ಮದ್ದೂರಿಗೆ ಹೋದರು.

ಕನ್ನಡವನ್ನು ಶಿಸ್ತಿನಿಂದ ಕ್ರಮಬದ್ಧವಾಗಿ ಪಾಠ ಮಾಡುತ್ತಿದ್ದ, ವಿದ್ಯಾರ್ಥಿಗಳನ್ನು ಅಕ್ಕರೆಯಿಂದ ನೋಡುತ್ತಿದ್ದ ಪಂಡಿತರೊಬ್ಬರ ಪ್ರಭಾವಕ್ಕೆ ರಾಗೌ ಒಳಗಾದುದು ಪ್ರೌಢಶಾಲೆಯಲ್ಲಿದ್ದಾಗಲೇ ಕನ್ನಡ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಕಾರಣವಾಯಿತು. ೧೯೫೯ ರಲ್ಲಿ ಪ್ರೌಢಶಾಲಾ ವ್ಯಾಸಂಗವನ್ನು ಮುಗಿಸಿ ಎಸ್.ಎಸ್.ಎಲ್.ಸಿ.ಪರೀಕ್ಷೆಯನ್ನು ಪ್ರಥಮದರ್ಜೆಯಲ್ಲಿ ಪಾಸು ಮಾಡಿದರು.

ರಾಗೌ ಅವರು ಪದವಿ ಪೂರ್ವ ಶಿಕ್ಷಣ ಹಂತದಲ್ಲಿ ವಿಜ್ಞಾನದ ವಿದ್ಯಾರ್ಥಿಯಾಗಿದ್ದರು. ನಂತರದಲ್ಲಿ ಮೈಸೂರು ಮಹಾರಾಜ ಕಾಲೇಜಿನಲ್ಲಿ ಕನ್ನಡವನ್ನು ಪ್ರಧಾನ ವಿಷಯವಾಗಿ, ಭಾಷಾ ವಿಜ್ಞಾನವನ್ನು ಅಧೀನ ವಿಷಯವಾಗಿಯೂ ತೆಗೆದುಕೊಂಡು ಬಿ.ಎ. ಓದಲು ಸೇರಿಕೊಂಡರು.

ಡಿ.ಎಲ್. ನರಸಿಂಹಾಚಾರ್, ಜಿ.ವರದರಾಜರಾವ್, ಹಾ.ಮಾ.ನಾಯಕ, ಉ.ಕಾ.ಸುಬ್ಬರಾಯಾಚಾರ್, ಸುಜನಾ, ಯು.ಆರ್.ಅನಂತಮೂರ್ತಿ ಮೊದಲಾದ ಗುರುವೃಂದ ರಾಗೌ ಅವರಿಗೆ ಲಭಿಸಿತು.

ಕವಿತೆಗಳ ರಚನೆ ಕಾಲೇಜು ದಿನಗಳಲ್ಲಿ ಮುಖ್ಯ ಹವ್ಯಾಸವಾಯಿತು. ವಿಮರ್ಶಾ ಲೇಖನಗಳನ್ನೂ ಬರೆಯುತ್ತಿದ್ದರು. 'ಗೀತಾಂಜಲಿ'ಯಿಂದ ಅನುವಾದಿಸಿದ 'ಬದುಕು ಮತ್ತು ಸಾವು' ಆತ್ಮೋದ್ದೀಪನದ ಅಪೇಕ್ಷೆಯಿಂದ ರಚನೆಯಿಂದ "ಮುಳುಗು ಮನವೆ" ಮೊದಲಾದ ಕವಿತೆಗಳು ಕಾಲೇಜು ಮ್ಯಾಗಜೀನಿನಲ್ಲಿ ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾದವು.

ರಾಗೌ ತಮ್ಮ ವಿದ್ಯಾರ್ಥಿ ಜೀವನವನ್ನು ಸಾರ್ಥಕವಾಗಿ ಮುಗಿಸುತ್ತಿದ್ದಂತೆಯೇ ವಿಶ್ವವಿದ್ಯಾನಿಲಯ ೧೯೬೫ರಲ್ಲಿ ಅವರನ್ನು ಮಹಾರಾಜ ಕಾಲೇಜಿಗೆ ಕನ್ನಡ ಅಧ್ಯಾಪಕರನ್ನಾಗಿ ನೇಮಕ ಮಾಡಿತು. ವಿದ್ಯಾರ್ಥಿ–ಲೇಖಕ ರಾಗೌ ನಂತರದಲ್ಲಿ ಅಧ್ಯಾಪಕ–ಲೇಖಕ ರಾಗೌ ಆದರು.

ಐದು ವರ್ಷಗಳ ಕಾಲ ಸ್ನಾತಕಪೂರ್ವ ಹಂತದಲ್ಲೂ ಮೂವತ್ತೆರಡು ವರ್ಷಗಳ ಕಾಲ ಸ್ನಾತಕೋತ್ತರ ಹಂತದಲ್ಲೂ ಕನ್ನಡ ಅಧ್ಯಾಪಕರಾಗಿ ಪ್ರವಾಚಕರಾಗಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ.

ಮೂವತ್ತೇಳು ವರ್ಷಗಳ ಸುದೀರ್ಘ ಸೇವೆಯ ನಂತರ ೨೦೦೨ ರಲ್ಲಿ ನಿವೃತ್ತರಾಗಿದ್ದಾರೆ. ನಿವೃತ್ತಿಯ ನಂತರವೂ ಅಧ್ಯಾಪನ ಕಾರ್ಯ ಅವರನ್ನು ಬಿಡಲಿಲ್ಲ. ಜೆ.ಎಸ್.ಎಸ್. ಸಂಸ್ಥೆಯವರು ಚಾಮರಾಜನಗರದಲ್ಲಿ ನಡೆಸುತ್ತಿರುವ ಮಹಿಳಾ ಕಾಲೇಜಿನ ಸ್ನಾತಕೋತ್ತರ ಕೇಂದ್ರದ ನಿರ್ದೇಶಕರಾಗಿ, ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಈಗ ಮಂಡ್ಯದ ಕರ್ನಾಟಕ ಸಂಘವು ಕನ್ನಡ ವಿಶ್ವವಿದ್ಯಾಲಯದ ಸಂಯೋಜಕತ್ವದಲ್ಲಿ ನಡೆಸುತ್ತಿರುವ ಎಂ.ಫಿಲ್ ತರಗತಿಗಳ ಸಂಶೋಧನಾ ಕೇಂದ್ರದ ಶೈಕ್ಷಣಿಕ ಜವಾಬ್ದಾರಿಗಳನ್ನು ನಿರ್ವಹಿಸುತ್ತಿದ್ದಾರೆ. ಅಲ್ಲಿನ ಕನ್ನಡ ಅಧ್ಯಯನ ಮಂಡಳಿಯ ಅಧ್ಯಕ್ಷರಾಗಿದ್ದಾರೆ.

## ರಾಗೌ ಅವರಿಂದ ರಚಿಸಲ್ಪಟ್ಟ ಕೃತಿಗಳು

**ಕಾವ್ಯ:**

ಯಾತ್ರೆ – ೧೯೬೬

ತೆಪ್ಪ – ೧೯೬೨

ಮೋಡ ಮುಸುಕಿದ ಆಕಾಸ – ೧೯೯೬

ನೆಲದ ಮರೆಯ ನಿಧಾನ – ೧೯೯೯

ಮಾತು ಮೌನಗಳ ನಡುವೆ – ೨೦೦೧

ಆರದಿರಲಿ ಈ ಬೆಳಕು – ೨೦೦೨

ಮಾತು ಮಾರ್ಗ – ೨೦೦೨

ನಿನ್ನೆ ನಾಳೆಗಳ ನಡುವೆ – (ಸಮಗ್ರ ಕಾವ್ಯ ೨೦೦೨)

ಅನಿಲ ಆರಾಧನಾ – (ಸಂಯುಕ್ತ ಕಾವ್ಯ– ಇತರರೊಡನೆ ೨೦೦೨)

ಅನಾಗತ – ೨೦೦೭

**ನಾಟಕ**

ದೊರೆ ದುರ್ಯೋಧನ (೧೯೯೭)

**ಸಾಹಿತ್ಯ ವಿಮರ್ಶೆ**

ರಾಘವಾಂಕ – ೧೯೯೭

ಕಾವ್ಯಾನುಶೀಲನ – ೧೯೬೮

ಅವಗಾಹನ – ೧೯೭೫

ಕುವೆಂಪು ಸಾಹಿತ್ಯ ವಿಮರ್ಶನ – ೧೯೭೮

ದುರ್ಗಸಿಂಹ – ೧೯೮೩

ಪ್ರಾಸ್ತಾವಿಕ – ೧೯೮೪

ಸಮಾಕೀರ್ಣ – ೧೯೯೧

ಕೆ.ಎಸ್. ನರಸಿಂಹಸ್ವಾಮಿ – ೨೦೦೨

ಬಿ.ಎಂ. ಶ್ರೀಕಂಠಯ್ಯ – ೨೦೦೭

ಪ್ರಾಚೀನ ಕಾವ್ಯ ಚಿಂತನ – ೨೦೦೭

## ಸಂಶೋಧನ ಮಹಾ ಪ್ರಬಂಧ

ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು –೧೯೯೨

## ಗ್ರಂಥ ಸಂಪಾದನೆ

| | | |
|---|---|---|
| ಸಾಹಸ ಭೀಮ ವಿಜಯಂ | – | (ಇತರರೊಡನೆ ೧೯೮೫) |
| ಅಜಿತ ತೀರ್ಥಂಕರ ಪುರಾಣಂ | – | (ಇತರರೊಡನೆ ೧೯೮೮) |
| ಲಕ್ಷ್ಮೀಶನ ಜೈಮಿನಿ ಭಾರತ | – | (ಇತರರೊಡನೆ ೧೯೯೩) |
| ಸರ್ವಜ್ಞನ ವಚನಗಳು | – | ೨೦೦೩ |

## ಜಾನಪದ

| | | |
|---|---|---|
| ನಮ್ಮ ಗಾದೆಗಳು | – | ೧೯೬೮ |
| ಕಿಟ್ಟೆಲ್ ಕೋಶದ ಗಾದೆಗಳು | – | ೧೯೬೯ |
| ಕರ್ಣಾಟಕ ಜನಪದ ಕಥೆಗಳು | – | ೧೯೬೯ |
| ನಮ್ಮ ಒಗಟುಗಳು | – | ೧೯೭೦ |
| ಜನಪದ ನಂಬಿಕೆಗಳು | – | (ಇತರರೊಡನೆ ೧೯೭೨) |
| ಕನ್ನಡ ಶಿಶುಪ್ರಾಸಗಳು | – | ೧೯೭೨ |
| ಜನಪದ ರಾಮಾಯಣ | – | (ಇತರರೊಡನೆ ೧೯೭೩) |
| ಜಾನಪದ ಸಂಕೀರ್ಣ | – | ೧೯೮೧ |
| ಜನಪದ ಸಾಹಿತ್ಯ ರೂಪಕಗಳು | – | ೧೯೮೧ |
| ಚಾಮಾಯಿ | – | ೧೯೮೧ |
| ಜಾನಪದ ಸಂಶೋಧನ | – | ೧೯೮೧ |
| ಜನಪದ ಆಟಗಳು | – | ೨೦೦೧ |
| ಜನಪದ ಮಹಾ ಭಾರತ ಸಮಾಲೋಚನೆ | – | ೨೦೦೫ |

## ಸಂಶೋಧನೆ

ಷಷ್ಟಿ ಸಂಪದ – ೨೦೦೫

**ಮಕ್ಕಳ ಸಾಹಿತ್ಯ**

ಕುಮಾರ ರಾಮ – ೧೯೭೮

ಕಂದನ ಕವನಗಳು – ೧೯೭೮

ಆರು ಪ್ರಾಣಿ ಕಥೆಗಳು – ೧೯೭೮

**ಸಂಪಾದನೆ**

ಬಿ.ಎಂ.ಶ್ರೀ. ನೂರರ ನೆನಪು (ಇತರರೊಡನೆ) – ೧೯೮೪

ಕೈಲಾಸಂ ಬದುಕು ಬರಹ (ಇತರರೊಡನೆ) – ೧೯೮೫

ಮಾಸ್ತಿಯವರು ಮತ್ತು ಚಿಕವೀರ ರಾಜೇಂದ್ರ (ಇತರರೊಡನೆ) – ೧೯೮೫

ವಿನಯೋನ್ನತಿ (ಇತರರೊಡನೆ) – ೧೯೮೫

ಕನ್ನಡ ಕವಿಗಳು ಕಂಡ ಮೈಸೂರು – ೧೯೯೦

ಬೇಂದ್ರೆ ಸಾಹಿತ್ಯ ಸಮಾಲೋಚನೆ – ೧೯೯೩

ಮಹಿಳಾ ಅಧ್ಯಯನದ ಆಯಾಮಗಳು – ೨೦೦೮

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ – ಸಂ–೫ ಭಾಗ–೨ ೨೦೦೮

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ – ಸಂ–೫ ಭಾಗ–೩ ೨೦೦೮

**ರಾಗೌ ಅವರಿಗೆ ಸಂದ ಪ್ರಶಸ್ತಿ ಮತ್ತು ಗೌರವ ಸನ್ಮಾನಗಳು:**

❖ ರಾಗೌ ಅವರಿಗೆ ೧೯೭೦ ರಂದು "ನಮ್ಮ ಒಗಟುಗಳು" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ.

❖ ೧೯೭೪– "ಜಾನಪದ ಸಂಕೀರ್ಣ" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

❖ ೧೯೭೮– "ಕುವೆಂಪು ಸಾಹಿತ್ಯ ವಿಮರ್ಶನ" ಕೃತಿಗೆ ಕುವೆಂಪು ವಿದ್ಯಾವರ್ಧಕ ಟ್ರಸ್ಟ್ ಪ್ರಶಸ್ತಿ, ದೊರೆತಿದೆ.

❖ ೧೯೮೪– ಮೈಸೂರು ವಿಶ್ವವಿದ್ಯಾನಿಲಯದ "ಪ್ರಬುದ್ಧ ಕರ್ಣಾಟಕ" ತ್ರೈಮಾಸಿಕ ಪತ್ರಿಕೆಯ ಸಂಪಾದಕ (೧೯೮೪–೮೭).

❖ ೧೯೮೫– "ರನ್ನ ವಿರಚಿತ ಸಾಹಸ ಭೀಮ ವಿಜಯಂ" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಬಹುಮಾನ.

❖ ೧೯೮೮ – "ರನ್ನ ವಿರಚಿತ ಅಜಿತ ತೀರ್ಥಕರ ಪುರಾಣಂ" ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

❖ ೧೯೯೦ ರಂದು ಪಿಎಚ್‌ಡಿ ಪದವಿ ಪ್ರಾಪ್ತಯಾಯಿತು.

❖ ೧೯೯೩ – "ಲಕ್ಷ್ಮೀಶನ ಜೈಮಿನಿ ಭಾರತ" ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದಿದ್ದಾರೆ.

- ೧೯೯೫ ರಂದು ೪ನೇ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ಮದ್ದೂರು.
- ೧೯೯೫ ರಂದು ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ "ಜಾನಪದ ತಜ್ಞ" ಪ್ರಶಸ್ತಿ ಲಭಿಸಿದೆ.
- ೧೯೯೭ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಸದಸ್ಯತ್ವ ಪಡೆದರು– ೧೯೯೭–೯೮.
- ೨೦೦೦ರಲ್ಲಿ ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಲಭಿಸಿದೆ.
- ೨೦೦೮–"ಅನಾಗತ" ಕವನ ಸಂಕಲನಕ್ಕೆ ಎಚ್.ಡಿ. ಚೌಡಯ್ಯ ಕಾವ್ಯ ಪ್ರಶಸ್ತಿ ಮಂಡ್ಯದ "ಜನದನಿ" ಸಂಘಟನೆಯಿಂದ ಪಡೆದದ್ದು.
- ೨೦೦೯ ರಲ್ಲಿ ಕಾರವಾರದಲ್ಲಿ ನಡೆದ "ಕರ್ನಾಟಕ ವಿಶ್ವವಿದ್ಯಾನಿಲಯದ ೨೫ನೇಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಸರ್ವಾಧ್ಯಕ್ಷತೆ ವಹಿಸಿದ್ದರು.

ಹೀಗೆ ರಾಗೌ ಜ್ಞಾನ, ಶಿಸ್ತು, ಗುಣ, ಸಾಧನೆ ಇವುಗಳಿಂದ ತುಂಬಾ ಉತ್ತಮ ಸ್ಥಾನದಲ್ಲಿ ಕಂಡು ಬರುತ್ತಾರೆ. ಹಾಗಾಗಿಯೇ ರಾಗೌ ಕನ್ನಡದ ಸಜ್ಜನಿಕೆ ಸಂಸ್ಕೃತಿ ಪರಂಪರೆಯ ಮುಖ್ಯ ಹೆಸರು.

**ಅಡಿ ಟಿಪ್ಪಣಿಗಳು:**

**೧) ಡಾ॥ ರಾಗೌ: ವ್ಯಕ್ತಿ–ಅಭಿವ್ಯಕ್ತಿ –ಡಾ॥ಬೋರೇಗೌಡ ಚಿಕ್ಕಮರಳಿ ,ಪುಟ ಸಂಖ್ಯೆ: ೫–೬, ಅವಿನಾಶ ಪ್ರಕಾಶನ–ಮಂಡ್ಯ–೨೦೦೯.**

**೨) ಡಾ॥ ರಾಗೌ: ವ್ಯಕ್ತಿ–ಅಭಿವ್ಯಕ್ತಿ –ಡಾ॥ಬೋರೇಗೌಡ ಚಿಕ್ಕಮರಳಿ ,ಪುಟ ಸಂಖ್ಯೆ: ೬೮–೭೪ ಅವಿನಾಶ ಪ್ರಕಾಶನ–ಮಂಡ್ಯ–೨೦೦೯.**

# ಅಧ್ಯಾಯ- 4

## ಡಾ. ರಾಗೌ ಅವರ ಕಾವ್ಯದಲ್ಲಿ ಸಾಮಾಜಿಕ ಚಿಂತನೆ

ಆಧುನಿಕ ಕನ್ನಡ ಸಾಹಿತ್ಯವು ಪಾಶ್ಚಾತ್ಯ ಮತ್ತು ದೇಶಿಯ ಪ್ರೇರಣೆ ಪ್ರಭಾವಗಳಿಗೆ ಒಳಗಾಗಿ ಸಾಹಿತ್ಯ ಪ್ರಕಾರ ಮತ್ತು ವಸ್ತುವಿನಲ್ಲಿ ವೈವಿಧ್ಯತೆ ಪಡೆಯಿತು. ಕಾವ್ಯ ಪ್ರಕಾರದಲ್ಲಿ ಗಮನಾರ್ಹ ಕೃಷಿ ನಡೆದು ಕವಿಗಳ ಮೆಚ್ಚುಗೆಯ ಮಾಧ್ಯಮವಾಯಿತು. ಪ್ರಾಚೀನ ಸಾಹಿತ್ಯದಲ್ಲಿ ಕೇವಲ ವರ್ಣನೆಗಷ್ಟೇ ಹೆಚ್ಚು ಮೀಸಲಾಗಿದ್ದ ಅಂಶಗಳನ್ನು ಆಧುನಿಕ ಕವಿಗಳು ಕೇಂದ್ರ ವಸ್ತುವನಾಗಿ ಮಾಡಿಕೊಂಡರು.

ಕನ್ನಡ ಸಾಹಿತ್ಯಕ್ಕೆ ಡಾ.ರಾಗೌ ಅವರು ನೀಡಿದ ಕಾವ್ಯ ವಿಶಿಷ್ಟ ವೈವಿಧ್ಯವಾದವು. ಪ್ರಕೃತಿ, ಜೀವನ, ಜನಪದ, ಆಧ್ಯಾತ್ಮ ವ್ಯಕ್ತಿದರ್ಶನ ಮುಂತಾದ ಸಮಸ್ತ ವಸ್ತುಗಳೆಲ್ಲವು ಕಾವ್ಯವಾಗಿವೆ.ಸಮಾಜವೂ ಮುಖ್ಯ ವಸ್ತುವಾಗಿದೆ. ಅದರಿಂದ ಜಾತಿ, ಸ್ತ್ರೀ, ಶ್ರೀಸಾಮಾನ್ಯರು, ರಾಜಕೀಯ ವ್ಯವಸ್ಥೆ ಎಂಬಂತವು ವಸ್ತುಗಳಾಗಿ ಕಾವ್ಯವನ್ನು ಸೃಷ್ಟಿಸಿರುವುದನ್ನು ಕಾಣಬಹುದು. ಆಡುವ ಮಾತನ್ನೆಲ್ಲ ಕಾವ್ಯ ಮಾಡುವ ಗುಣ ಡಾ. ರಾಗೌ ಅವರದು. ಅವರು ಯಾವ ಒಂದು ಪಂಥಕ್ಕೂ ಅಂಟಿಕೊಳ್ಳದೆ ಸ್ವತಂತ್ರವಾಗಿ ಮತ್ತು ನವೀವ ರೀತಿಯಲ್ಲಿ ಬರೆಯುತ್ತಿರುವ ಕವಿ.

ಸ್ವಾನುಭವಗಳು, ಕಂಡಂತಹ ನೋವು, ನಲಿವುಗಳು ಜಗತ್ತಿನ ವಿಭಿನ್ನ ರೀತಿ–ನೀತಿಗಳು, ಬದುಕು, ಬಾಳಿನ ಕುರಿತಾದ ವೈಚಿತ್ಯಗಳು, ಲೋಕದ ವಿಷಯಗಳು, ಜೀವನವನ್ನು ಕುರಿತಾದ ಕೆಲವು ಕೆಟ್ಟ ನಿಲುವುಗಳು ಇವುಗಳನ್ನು ಅಭಿವ್ಯಕ್ತಗೊಳಿಸಲು ಕಾವ್ಯದ ಮುಖೇನ ರಾಗೌ ಮಾಡಿರುವುದು ಕಂಡು ಬರುತ್ತದೆ.

ಕವಿ ಮತ್ತು ಕಾವ್ಯದ ಹುಟ್ಟು ಬೆಳವಣಿಗೆ, ಬದುಕು ಈ ಸಮಾಜದಲ್ಲೇ ಆಗುತ್ತದೆ. ಆದ್ದರಿಂದ ಸಾಹಿತಿಯಾದವರು ಸ್ಪಂದಿಸಬೇಕಾದುದು ಈ ಸಮಾಜದ ಬದುಕಿನೊಂದಿಗೆ, ಅದರ ಕಷ್ಟ–ಸುಖಗಳೊಂದಿಗೆ ಹೀಗಿದ್ದು ನಮ್ಮಲ್ಲಿ ಅನೇಕರು ಸಾಮಾಜಿಕ ಜೀವನದೊಂದಿಗೆ ಬೆರೆಯದ ಸಾಹಿತ್ಯ ರಚಿಸಿದ್ದಾರೆ. ಆದರೆ ಡಾ.ರಾಗೌ ಮಾತ್ರ ಸಾಮಾಜಿಕ ಜೀವನದೊಂದಿಗೆ ಬೆರೆತು ತಮ್ಮ ಸ್ವಾನುಭವಗಳನ್ನು ಕಾವ್ಯಗಳಲ್ಲಿ ಮೆಲುಕು ಹಾಕಿರುವಂತದ್ದು.

ಕವಿಯ ಸಂವೇದನೆ, ಅಭಿವ್ಯಕ್ತಿ ಮುಖ್ಯವಾಗಿ ತಾನು ಬದುಕುತ್ತಿರುವ ಸಮಾಜದಲ್ಲಿ ಬೇರು ಬಿಟ್ಟಿರಬೇಕೆನ್ನುವುದು ಎಲ್ಲರ ಅಭಿಪ್ರಾಯ ಇಂದಿನ ಸಾಮಾಜಿಕ ಪರಿಸ್ಥಿತಿಯನ್ನು

ಥೈಸಿಕೊಳ್ಳುವಾಗ ಕೆಲವು ಅಂಶಗಳನ್ನು ಗರ್ಮಿಸುವುದು ಅಗತ್ಯವಾಗಿದೆ. ನಮ್ಮ ಸಾಮಾಜಿಕ ಪರಂಪರೆ ಸತ್ಯ, ನ್ಯಾಯ, ಪ್ರಾಮಾಣಿಕತೆ, ಇಂಥ ಮೂಲಭೂತ ಶಿಷ್ಟ ಮೌಲ್ಯಗಳನ್ನು ಕೊಡುವುದರ ಜೊತೆಗೆ ಈ ಸಮಾಜದ ಕ್ರಿಯೆಗಳಿಗೆ ಕಣ್ಣಿಗೆ ಕಾಣದ ತಾಣದಲ್ಲಿ ಕಾರಣ ಹುಡುಕುವ ಅಪೂರ್ಣ ಶ್ರದ್ಧೆಯ ಮಂದ ಬುದ್ಧಿಯನ್ನು ದಯಪಾಲಿಸಿರುವುದನ್ನು ಕಾಣಬಹುದು.

ಲೌಕಿಕ ಸಮಸ್ಯೆಗಳಿಗೆ ಅಲೌಕಿಕ ಕಾರಣ ಮತ್ತು ಪರಿಹಾರಗಳನ್ನು ಹುಡುಕುತ್ತಾ ಹೋದಂತೆ ಸಮಸ್ಯೆ ಮತ್ತಷ್ಟು ಗಾಢವಾಗುತ್ತದೆ. ಇಂದು ಕನ್ನಡ ಸಾಹಿತಿಗಳ ಕ್ಷೇತ್ರದಲ್ಲಿ ಬ್ರಾಹ್ಮಣ, ಶೂದ್ರ ಎಂಬ ಸಾಮಾಜಿಕ ಕಲ್ಪನೆ ಒಂದು ಸೈದ್ಧಾಂತಿಕ ನಿಲುವಾಗಿ ಕೇಳಿಬರುತ್ತಿದೆ. ಇಲ್ಲಿ ನಿಲುವು ವರ್ಣಾಶ್ರಮ ವ್ಯವಸ್ಥೆಯ ವಿರೋಧವಾಗಿರ ಬೇಕೇ ಹೊರತು ಮತ್ತೆ ಅದನ್ನೇ ಅವಲಂಬಿಸಿ ವರ್ಣಕಲಹ ಪ್ರೇರಕವಾಗಿರಬಾರದು. ಇವತ್ತಿನ ಸಮಾಜದಲ್ಲಿ ಶೋಷಣೆಯ ಮೂಲ ಹಣ ಅಧಿಕಾರ ಮತ್ತು ಕುಮ್ಮಕ್ಕು ಕೊಡುವ ವ್ಯವಸ್ಥೆಯಲ್ಲಿದೆಯೆಂಬುದನ್ನು ಮರೆಯುವಂತ್ತಿಲ್ಲ. ಇಂದು ಆರ್ಥಿಕ ಶಕ್ತಿಯ ಪಾತ್ರ ಸಾಮಾಜಿಕವಾಗಿ ಮಹತ್ವದ್ದಾಗಿದ್ದು ಆರ್ಥಿಕವಾಗಿ ಶಕ್ತನಾದವನ್ನೊಬ್ಬ ಮಿಕ್ಕೆಲ್ಲ ಸಂಗತಿಗಳನ್ನು ಗೌಣವಾಗಿಸಿ ಉಚ್ಚವರ್ಗದವನಾಗಲು ಇಲ್ಲಿ ಸಾಧ್ಯವಾಗುತ್ತದೆ.

ಪ್ರಕೃತಿ ಮನುಷ್ಯನ ಸಂಬಂಧದಂತೆಯೇ ಸಮಾಜ ವ್ಯಕ್ತಿಯ ನಡುವಿನ ಸಂಬಂಧ ಅವಿನಾಭಾವವಾದ್ದು. ಹಾಗಾಗಿ ಸಮಾಜದಲ್ಲಿ ಬದುಕು ಸವೆಸುತ್ತಿರುವ ಮನುಷ್ಯ ಸಮಾಜಕ್ಕೆ ಕಂಟಕವಾಗದೆ ಆದರ್ಶವಾಗಬೇಕೆಂದು ತಿಳಿಸಿದ್ದಾರೆ.

ಮನುಷ್ಯ ಸಮಾಜದಲ್ಲಿ ಪ್ರಯೋಜನಕ್ಕೆ ಬಾರದಂತಿರಬಾರದು. ಸಮಾಜದಲ್ಲಿ ನಿಕೃಷ್ಟ ಎಂದು ಯಾವುದನ್ನು ಪರಿಗಣಿಸಬಾರದು. ಸಮಾಜಕ್ಕೆ ಎಷ್ಟು ಕೊಟ್ಟರು ಎಂಬುದಕ್ಕಿಂತ ಏನು ಕೊಟ್ಟರು ಎಂಬುದು ಮುಖ್ಯವಾಗುತ್ತದೆ. ಮನುಷ್ಯನ ಸ್ವಾರ್ಥ, ಲೋಭ, ದುರಾಸೆಗಳಿಂದ ಎಂಬ ವಿಷಾದ ಇದೆ.

ರಾಜಕೀಯ ವ್ಯವಸ್ಥೆಯಲ್ಲಿನ ಅನ್ಯಾಯ, ಅಧರ್ಮ, ಅಧಿಕಾರದ ದರ್ಪ, ಮುಖವಾಡ ಜನತೆ, ಸರ್ವಾಧಿಕಾರತ್ವ ಅಂಶಗಳನ್ನು ಕಾಣಬಹುದು, ಹಾಗೂ ಜಾತಿ ಹಿನ್ನೆಲೆಯಲ್ಲಿ ಜಾತಿ ಎಂಬ ಅಮಾನುಷ ವ್ಯವಸ್ಥೆ ಹೇಗೆ ತನ್ನನ್ನು ಸಮಾಜದಲ್ಲಿ ಆವರಿಸಿಕೊಂಡಿದೆ ಎಂಬುದನ್ನು, ಜಾತಿಯಿಂದ ನಡೆಯುತ್ತಿರುವ ಶೋಷಣೆ, ತುಳಿತ, ದುರ್ಬಲರ ನೋವು, ಅವರನ್ನು ಹತ್ತಿಕ್ಕುವ ಬಗೆ ಈ ಅಂಶಗಳು ನಂತರದಲ್ಲಿ ಮಹಿಳೆ(ಸ್ತ್ರಿ)ಯರಿಗೆ ಸಂಬಂಧಿಸಿದಂತೆ ಮಹಿಳೆಯರ ಸ್ಥಿತಿ–ಗತಿಗಳ ಕುರಿತಾಗಿ ಆಕೆಯ ಸ್ಥಾನಮಾನ ಏನ್ನೆಂಬುದನ್ನು ಕಾವ್ಯದಲ್ಲಿ ತಿಳಿಸುವ ಪ್ರಯತ್ನ ಕವಿಮಾಡಿದ್ದಾರೆ.

ಜೋಗೆ ಸ್ತ್ರಿಯ ಮೇಲೆ ಹಿಂದಿನಿಂದಲೂ ಶೋಷಣೆ ದಬ್ಬಾಳಿಕೆ ಮಾಡುತ್ತಿರುವ ಹೀನಾಯ ಸಮಾಜವನ್ನು ಪುರುಷ ಸಮಾಜದ ಚಿತ್ರಣವನ್ನು ನೀಡುತ್ತಾರೆ. ಶ್ರೀ ಸಾಮಾನ್ಯನ ಪರಿಸ್ಥಿತಿ ಸಮಾಜದಲ್ಲಿ ವಿಭಿನ್ನ ರೂಪತೆಯಿಂದ ಕೂಡಿದುದಾಗಿದೆ. ವಿಭಿನ್ನ ರೀತಿಯ ಮನುಷ್ಯರು, ಅವರ ಜೀವನ ವಿಧಾನ, ಬದುಕನ್ನು ಕಾಣುವ ಬಗೆ ಈ ಅಂಶಗಳು ಕಾವ್ಯದ ವಿಷಯ ವಸ್ತುಗಳಾಗಿವೆ. ಇಂತಹ ಆನೇಕ ಅಂಶಗಳ ಬಗ್ಗೆ ಕವಿ ಕಾವ್ಯಗಳಲ್ಲಿ ತಿಳಿಸಿರುವುದನ್ನು ಈ ಅಧ್ಯಯನದಲ್ಲಿ ಕಾಣಬಹುದು.

## ಅಧ್ಯಾಯ-೪.೧

## ರಾಜಕೀಯ ಸಂಬಂಧಿಸಿದ ಕವಿತೆಗಳು.

ಡಾ. ರಾಗೌ ಅವರ ಸಮಗ್ರ ಕಾವ್ಯವನ್ನು ಅಧ್ಯಯನ ಮಾಡಿದಾಗ ರಾಜಕೀಯಕ್ಕೆ ಸಂಬಂಧಿಸಿದ ಕವಿತೆಗಳು ಕಂಡುಬರುತ್ತವೆ. ಸಮಾಜದ ಒಂದು ಭಾಗವೇ ಆದ ರಾಜಕೀಯ ಸಂಬಂಧಿ ಅಂಶಗಳು ಕಂಡುಬರುತ್ತವೆ. ಇವು ವಿಷಾಧವನ್ನುಂಟು ಮಾಡುತ್ತವೆ. ಎಚ್ಚರವಿರಬೇಕಾದ ಪ್ರಜೆಗಳು, ಜವಾಬ್ದಾರಿ ಮತ್ತು ಕರ್ತವ್ಯ ಪ್ರಜ್ಞೆ ಹೊಂದಿರಬೇಕಾದ ರಾಜಕಾರಣಿ, ಹಾಗೂ ಅವರ ಬೇಜವಾಬ್ದಾರಿತನ ಇವು ಸಮಾಜದ ಮೇಲೆ ಬೀರುವ ಪ್ರಭಾವ ಪರಿಣಾಮಕಾರಿಯಾದದ್ದು. ಅಧಿಕಾರಿ ವರ್ಗದ ಅಮಾನುಷ ಧೋರಣೆ, ಅಧಿಕಾರಿಗಳ ಸರ್ವಾಧಿಕಾರಿ ಧೋರಣೆ, ಪ್ರಜೆ ಮತ್ತು ಪ್ರಭುಗಳ ನಡುವಿನ ಅಂತರ, ಅಧಿಕಾರದ ದರ್ಪ, ಪ್ರಜಾಸತ್ತೆಯ ಮೇಲೆ ಚುನಾವಣೆಯ ಹಿನ್ನೆಲೆಯಲ್ಲಿ ನಡೆಸುವ ಹಲ್ಲೆ, ಅಹಂಕಾರದಲ್ಲಿ ಮುಳುಗಿರುವ ಅಧಿಕಾರಿಗಳು ಈ ಎಲ್ಲಾ ಅಂಶಗಳು ಸಮಾಜದ ಮೇಲೆ ಪ್ರಭಾವ ಬೇರುತ್ತವೆ. ಸ್ವಾರ್ಥಿಗಳ, ಮುಖವಾಡದರಿಸಿದಂತಹ, ಭ್ರಷ್ಠರಾಜಕಾರಣಿಗಳ ಭಸ್ಮಾಸುರತನದಿಂದಾಗಿ ಸಮಾಜಕ್ಕಾಗುತ್ತಿರುವ ಅನ್ಯಾಯವನ್ನು ಕವಿ ಖಂಡಿಸಿದ್ದಾರೆ. ಈ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಪ್ರಸ್ತುತ ಭಾಗದಲ್ಲಿ ಅನಾವರಣಗೊಳಿಸಲಾಗಿದೆ.

**'ರಾಜಕಾರಣ'** ಕವನವು ರಾಜಕಾರಣವು ಹೇಗೆ ವ್ಯಾಪಿಸಿದೆ ಎಂಬುದನ್ನು ತಿಳಿಸುತ್ತದೆ. ಭವಿಷ್ಯದ ರಾಜಕಾರಣ ಹೇಗಿರಬೇಕು ಕವಿ ಎಂಬುದು ಕವಿತೆಯಲ್ಲಿ ತಿಳಿಸಲಾಗಿದೆ.

**ಇಲ್ಲಸಲ್ಲದ ನೆನಪುಗಳಲಿ**
**ಮುಂದುವರಿಯುತ್ತಿದೆ ರಾಜಕಾರಣ ;**
**ಕೆಡುಕಿನ ಬೀಜಗಳು ಗಟ್ಟಿಯಾಗುತ್ತಾ**
**ಫಲವ ಉಣ್ಣಬೇಕಾದೀತು**
**ಸುಮ್ಮನೆ 'ಪಾಪದ ಜನ'**
**ಕಿಂಚಿತ್ತಾದರೂ ಎಚ್ಚೆತ್ತು ಕೊಳ್ಳದಿರೆ**
**ನೆಟ್ಟಗಾಗದು ಭವಿಷ್ಯದ ಕಾಲಮಾನ.**

**(ಪು.ಸಂ.೬೧೪)**

**ರಾಜಕಾರಣ** ಇಂದು ಕೇವಲ ಹೆಸರಿಗಷ್ಟೆ ನಡೆಯುತ್ತಿದೆ. ಇದು ಇಲ್ಲಸಲ್ಲದ ನೆನಪುಗಳಲ್ಲಿ ಮುಂದುವರಿಯುತ್ತಿದೆ. ರಾಜಕಾರಣಿಗಳು ಮಾಡುವ ಕೆಲಸ ಕಾರ್ಯಗಳು ಉತ್ತಮವಾದುವಾಗಿಲ್ಲ,

ಒಳ್ಳೆಯ ಕೇ ಸಗಳು ನಡೆಯುತ್ತಿಲ್ಲ. ಕೆಟ್ಟ ಕೆಲಸಗಳೇ ಮಾಡಿ, ಅವುಗಳೇ ಮುಂದೆ ಬೇರೆ ರೂಪ ಪಡೆದು ಅದರ ಫಲ ಏನಿದೆ, ಅದನ್ನು ಜನತೆಗೆ ನೀಡುವುದು ಆಗಿದೆ.

ರಾಜಕಾರಣ ಕಲುಷಿತಗೊಂಡಿದೆ. ಉತ್ತಮವಾದುದನ್ನು ಹುಡುಕುವಂತಾಗಿದೆ. ಪಾಪದ ಜನರು ಸ್ವಲ್ಪವಾದರೂ ಎಚ್ಚೆತ್ತುಕೊಳ್ಳಬೇಕು. ಇಲ್ಲವಾದರೆ ಭವಿಷ್ಯದ ಬದುಕು ನೆಟ್ಟಗಾಗದು ಎನ್ನುತ್ತಾರೆ.

ಜನರು ಎಚ್ಚೆತ್ತುಕೊಳ್ಳಬೇಕು. ಭವಿಷ್ಯದ ಬದುಕು ಉಜ್ವಲವಾಗಿರಬೇಕು. ಉತ್ತಮ ಭವಿಷ್ಯ **ರೂಪುಗೊಳ್ಳುವಂತಾಗಬೇಕು.**

**'ಅಧಿಕಾರ'** ಕವನವು ಅಧಿಕಾರಿಗಳ ಕುರಿತಾಗಿ ತಿಳಿಸುತ್ತದೆ. ಅಧಿಕಾರದ ಮದ ಹೇರಿದ ಮನುಷ್ಯನ ಸ್ಥಿತಿ ಹೇಗಿರುತ್ತದೆ ಎಂಬುದನ್ನು ಇಲ್ಲಿ ಕಾಣಬಹುದು.

**ಅಧಿಕಾರ ಅಹಂಕಾರವ ಹಡೆಯುವುದು**
**ಅಹಂಕಾರ ಅಧಿಕಾರವ ಹೇರುವುದು**
**ಎರಡೊಂದಾಗಿ ಕೂಡಿರುವವನು**
**ಸರ್ವಾಧಿಕಾರಿಯಾಗಿ ಬೆಳೆಯುವನು**
**ಇದರಿಂದ ತಪ್ಪಿಸಿಕೊಂಡವ ಮಾತ್ರ**
**ನಮ್ಮ ನಿಜವಾದ ಮಾನವ.**

**(ಪು.ಸಂ.೫೯೧)**

ಅಧಿಕಾರ ಅಹಂಕಾರವನ್ನು ಹುಟ್ಟುಹಾಕುತ್ತದೆ, ಅಹಂಕಾರವೆನ್ನುವುದು ಅಧಿಕಾರವನ್ನು ಹೇರುತ್ತದೆ. ಇವೆರಡೂ ಒಳ್ಳೆಯ ಮಾರ್ಗಗಳಲ್ಲ. ಇವೆರಡೂ ಹೊಂದಿರುವವನು ಸರ್ವಾಧಿಕಾರಿಯಾಗಿ ಬೆಳೆಯುವನು.

ಇಂತಹ ಅಧಿಕಾರ, ಅಮಿಷಗಳಿಗೆ ಬಲಿಯಾಗಬಾರದು. ಅಧಿಕಾರ ಇದ್ದ ಮಾತ್ರಕ್ಕೆ ಅಹಂಕಾರ ಪಡೆಬೇಕೆಂದೇನಿಲ್ಲ. ಆದರೆ ಅದು ಸ್ವಭಾವ, ಅಧಿಕಾರದ ಮದ ಎಂತವರನ್ನು ಬದಲಾಯಿಸುತ್ತದೆ. ಇಂತವುಗಳಿಂದ ತಪ್ಪಿಸಿಕೊಂಡು ಬಂದವ ಮಾತ್ರ ನಮ್ಮ ನಿಜವಾದ ಮಾನವ ಎನ್ನುತ್ತಾರೆ.

ಅಂದರೆ ಅಧಿಕಾರದ ದರ್ಪ ಮನುಷ್ಯತ್ವವನ್ನು ಮರೆಸುತ್ತದೆ. ಆದರೆ ಅದನ್ನು ಬಿಟ್ಟಾಗ ಮನುಷ್ಯ ಉತ್ತಮ ಅಂಶಗಳಿಂದ ಮರೆಯುತ್ತಾನೆ.

**‘ಅಧಿಕಾರಿ’** ಇಂದಿನ ಅಧಿಕಾರಿಗಳ ಕುರಿತು ಕವಿ ಈ ಕವಿತೆಯಲ್ಲಿ ಹೇಳಿದ್ದಾರೆ.

ಅಧಿಕಾರದ ಅಹಂಕಾರದಲ್ಲಿರುವ ಮನುಷ್ಯರ ಕುರಿತು ಹೇಳುತ್ತಾರೆ. ಅಧಿಕಾರಿಯಾದವನು ಅಧಿಕಾರದ ದರ್ಪದಲ್ಲಿ ಹೇಗೆಲ್ಲಾ ತನ್ನ ಕೈಕೆಳಗಿನವರನ್ನು ಬಳಸಿಕೊಳ್ಳುತ್ತಾನೆ, ಹಾಗೂ ಸಾಮಾನ್ಯನನ್ನು ಯಜ್ಞಪಶುವಾಗಿ ಬಳಸಿಕೊಳ್ಳುತ್ತಾರೆ ಎಂಬುದನ್ನು ಕಾಣಬಹುದು.

**ಹಸಿದ ಹುಲಿಯ ಮುಂದೆ ಆಕಳು ನಾವು**
**ತಿಂದರೂ ತಿಂದ, ಬದುಕಿದರೂ ಬದುಕಿಸಿದ**
**ಭವಿಷ್ಯವೆಲ್ಲ ಇವನ ಕೈಯಲ್ಲೆ,**
**ವರ್ತಮಾನವೂ ಕೂಡ;**

ಇಲ್ಲಿ ಅಧಿಕಾರಿ ಹಸಿದ ಹುಲಿ, ಆತನ ಮುಂದೆ ಸಾಮಾನ್ಯರು ಆಕಳಿನ ರೀತಿ, ತಿಂದರೂ ತಿನ್ನಬಹುದು, ಬೇಡ ಎಂದರೆ ಬಿಟ್ಟು ಬಿಡಬಹುದು. ಎಲ್ಲವೂ ಅವನಿಷ್ಟ. ಎಲ್ಲವೂ ನಮ್ಮ ಭವಿಷ್ಯ, ಹಾಗೂ ವರ್ತಮಾನವೂ ಆ ಅಧಿಕಾರಿಯ ಕೈಯಲ್ಲೆ ಇರುವಂತದ್ದು ಎನ್ನುತ್ತಾರೆ. ಕವಿ ಇಂತಹ ಮನಸ್ಥಿತಿಗಳನ್ನು ತುಂಬಾ ಹತ್ತಿರದಿಂದ ನೋಡಿದ್ದಾರೆ, ಹಾಗಾಗಿ ಅವರ ಕುರಿತು ಕವಿತೆಯ ಮೂಲಕ ತಮ್ಮ ಅಭಿಪ್ರಾಯ ನೀಡಿರುವುದನ್ನು ಕಾಣಬಹುದು.

ಅಧಿಕಾರಿಗೆ ಸಾಮಾನ್ಯ ಜನರು ಹೇಗೆ ಎಂದರೆ ತಿಪ್ಪೆ ಮೇಲಿನ ಸಿಪ್ಪೆಯ ರೀತಿ ಎನ್ನುತ್ತಾರೆ ಕವಿ. ಅಂದರೆ ಎಲ್ಲವೂ ಅಧಿಕಾರಿಯದೇ.

**ಯಾರು ಗೊತ್ತೆ ಈ ಭೂಪ.**
**ಹಳೆಯ ರಾಜಮಹರಾಜರೆಲ್ಲರ ಹೊಸ ರೂಪ.**

ಇಂದಿನ ಅಧಿಕಾರಿಯಾಗಿ ದರ್ಪ ತೋರುತ್ತಾ ಸಾಮಾನ್ಯರನ್ನು ಆಳುತ್ತಿರುವವನು ಆತ ಬೇರೆ ಯಾರೂ ಅಲ್ಲ. ಹಿಂದೆ ಇದ್ದಂತಹ ರಾಜಮಹಾರಾಜರುಗಳ ಹೊಸ ರೂಪದಲ್ಲಿ ಕಾಣಿಸಿಕೊಳ್ಳುತ್ತಿರುವುದು ಎಂಬುದನ್ನು ತಿಳಿಸಿದ್ದಾರೆ. ‘ಜನತಂತ್ರ’ ಕವನವು ಪ್ರಜಾಸತ್ತೆಯ ಮೇಲೆ ನಿತ್ಯ ಹಲ್ಲೆ ನಡೆಯುತ್ತಿರುವುದರ ಕುರಿತು ತಿಳಿಸುತ್ತದೆ.

ಪ್ರಜಾಸತ್ತೆಯ ಮೇಲೆ ಇಂದಿನ ರಾಜಕೀಯ ವ್ಯವಸ್ಥೆಯ ಪ್ರಭಾವ ಹೇಗೆಲ್ಲಾ ಬೀರುತ್ತಿದೆ. ಪ್ರಜಾಪ್ರಭುತ್ವದ ನಾಡಲ್ಲಿ ಪ್ರಜೆಗಳ ಮೇಲೆ ಹೇಗೆ ಹಲ್ಲೆ ನಡೆಸಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಕಾರ್ಯಕ್ಕೆ ಮುಂದಾಗಿರುವ ಅಧಿಕಾರಿಶಾಹಿಗಳ ಕುರಿತಾಗಿ ಈ ಕವಿತೆ ಚಿತ್ರಣಗೊಂಡಿದೆ.

**ಸ್ವಾತಂತ್ರ್ಯ ಬಂದಿದ್ದರೂ ಅದರರ್ಥ ತಿಳಿದವರೆಷ್ಟು ಮಂದಿ**

**ಯಂತ್ರ ಚಾಲಕಗಿಷ್ಟು ಬೇಕಿಲ್ಲವೆ ತರಬೇತಿ.**
**ಜನನಾಯಕರೆಲ್ಲ ಘನ ಕುರ್ಚಿಗೆ ಹೋರೆ**
**ಜನ ತಂತ್ರದೀ ವ್ಯವಸ್ಥೆಯಲ್ಲಿ ಜನತೆಗೆಲ್ಲಿದೆ ನೆಲೆ.**

**(ಪು.ಸಂ.೧೫೮)**

ಸ್ವಾತಂತ್ರ್ಯ ಬಂದಿದ್ದರೂ ಇನ್ನು ಅದು ತಲುಪದಂತಿರುವ ಮಂದಿ ಬಹಳಷ್ಟಿದ್ದಾರೆ. ಜನರಿಂದ ಆಯ್ಕೆಯಾಗಿ ಹೋದಂತಹ ನಾಯಕರುಗಳು ಮುಖ್ಯವಾಗಿ ಗಮನ ಕೊಡುತ್ತಿರುವುದು ಅವರ ಅಧಿಕಾರ, ಹಣ, ಕುರ್ಚಿಗಾಗಿ, ಹಾಗಾಗಿ ಇಂತಹ ಕೆಟ್ಟ ವ್ಯವಸ್ಥೆಯಲ್ಲಿ ಜನತೆಗೆ ಎಲ್ಲಿದೆ ಉತ್ತಮ ನೆಲೆ ಎನ್ನುತ್ತಾರೆ.

ಓಟು ಪವಿತ್ರವಾದುದು ಅದು ನಮ್ಮ ರಾಷ್ಟ್ರದ ಅಭಿವೃದ್ಧಿ ಭವಿಷ್ಯವನ್ನು ಆಧರಿಸಿರುತ್ತದೆ. ಅದೇ ಪ್ರಜಾಪ್ರಭುತ್ವದ ಬೆಲೆ, ಇಂತಹ ಒಂದು ವ್ಯವಸ್ಥೆಯನ್ನು ಹೇಗೆ ಜಾತಿ, ಮತ, ಪಂಗಡಗಳು ಸೇರಿ ಯಂತ್ರದಂತೆ ಮಾಡಿಕೊಂಡಿದ್ದಾರೆ ಎಂಬುದನ್ನು ತಿಳಿಸುತ್ತಾರೆ ಕವಿ.

ಇಲ್ಲಿ ನಾಯಕರಾದವರು ಘನಕುರ್ಚಿಗಾಗಿ ಅಷ್ಟೆ . ಹಾಗಾಗಿ ಈ ವ್ಯವಸ್ಥೆಯಲ್ಲಿ ಜನತೆಗೆ ನೆಲೆ ಇಲ್ಲವಾಗುವುದು.

ಚುನಾವಣೆ ಪ್ರಕ್ರಿಯೆ ಯಾವ ಮಟ್ಟ ತಲುಪಿದೆ ಎಂದರೆ ಓಟಿಗೂ–ನೋಟಿಗೂ ವ್ಯತ್ಯಾಸವಿಲ್ಲ. ಈ ರೀತಿಯಲ್ಲಿ ಈ ವ್ಯವಸ್ಥೆಯ ಕುರಿತಾಗಿ ತಿಳಿಸುತ್ತಾ ಮುಂದುವರಿದು, ಚುನಾವಣೆಯ ಹೆಸರಿನಲ್ಲಿ ನಿತ್ಯಹಲ್ಲೆ ನಡೆಯುತ್ತಿದೆ.

ಇದು ಇಂದಿನ ರಾಜಕೀಯ ಜೀವನದ ಕುರಿತು ಕವಿ ವಿಷಾದ ವ್ಯಕ್ತಪಡಿಸುತ್ತಾರೆ.

**'ಜನತಾ ಜನಾರ್ಧನ'** ಕವನವು ರಾಜಕೀಯ ಪರಿಸ್ಥಿತಿಯ ಕುರಿತು ತಿಳಿಸುತ್ತದೆ. ಜನತೆ ಸಮಾಜದಲ್ಲಿ ಯಾವ ರೀತಿಯಲ್ಲಿ ಕಂಡುಬರುತ್ತಾರೆ. ರಾಜಕೀಯ ವ್ಯವಸ್ಥೆಯಲ್ಲಿ ಅವರ ಪಾತ್ರ ನಿರ್ವಹಣೆ ಹೇಗಿದೆ ಎಂಬಂತಹ ಅಂಶಗಳ ಬಗ್ಗೆ ಇಲ್ಲಿ ತಿಳಿಸುವ ಪ್ರಯತ್ನವನ್ನು ಕವಿ ಮಾಡಿದ್ದಾರೆ. ಕವಿ ಕವಿತೆಯಲ್ಲಿ ಹೀಗೆ ಹೇಳುತ್ತಾರೆ.

**ಯಾರದೋ ಭಾರಕ್ಕೆ ನಾವು ಕುಸಿದು ಹೋಗಿದ್ದೇವೆ.**
**ದಾರಿ ಸವೆಯಿತೆ ವಿನಾ ದುಃಖ ದುಪ್ಪಟ್ಟು,**
**ಅವರವರ ಹಿತ ಅವರು ನೋಡಿಕೊಂಡಿದ್ದೆ ಇತಿಹಾಸ**
**ಈವರೆಗೆ ನಡೆದಿದ್ದಲ್ಲ ಚೌಕಾಸಿಯ ಬಿಟ್ಟು.**

ಎಂದು ಹೇಳುವ ಮೂಲಕ ಕವಿ ಜನತೆಯ ಸ್ಥಿತಿಯನ್ನು ತಿಳಿಸುವ ಪ್ರಯತ್ನ ಮಾಡುತ್ತಾರೆ. ಇಂತಹ ಮಂದಿಯನ್ನು ಕವಿ ತುಂಬಾ ಹತ್ತಿರದಿಂದ ಕಂಡಿದ್ದಾರೆ. ಅದರ ಬಗ್ಗೆ ಕವಿತೆಯ ಮೂಲಕ ಅಭಿಪ್ರಾಯ ವ್ಯಕ್ತಪಡಿಸಿರುವುದನ್ನು ಕಾಣಬಹುದು.

ಯಾರದೋ ಭಾರಕ್ಕೆ ನಾವು ಕುಸಿದಿದ್ದೇವೆ, ಇದರಿಂದ ಒಳ್ಳೆಯದಾಗಿಲ್ಲ. ದುಃಖ ಇಮ್ಮಡಿಸಿದೆ. ಅಂದರೆ ಬೇರೆಯವರ ಕಾರ್ಯಕ್ಕೆ ದುಡಿಯುವ ಜನತೆ, ಆದರೆ ಅದರಿಂದ ಆ ಮಂದಿಗೆ ಯಾವುದೇ ಪ್ರಯೋಜನವಿಲ್ಲ, ಅದರ ಪ್ರಯೋಜನವೇನಿದ್ದರೂ ಕೆಲಸ ಮಾಡಿಸಿ ಕೊಳ್ಳುವವರಿಗೆ, ಆದರೆ ಮಾಡುವ ದುಃಖ ದುಪ್ಪಟ್ಟು, ಹೆಚ್ಚಾಗುತ್ತದೆ.

ರಾಜಕೀಯ ಜೀವನವೇ ಹಾಗೆ. ತಮ್ಮ ತಮ್ಮ ಕೆಲಸಗಳು ತಮಗೆ ಅಷ್ಟೆ ಎಂಬಂತಿರುತ್ತಾರೆ. ಅವರವರ ಅನುಕೂಲ ಅವರು ನೋಡಿಕೊಳ್ಳುತ್ತಾರೆ. ಅದೇ ಅವರ ಇತಿಹಾಸ ಇಂದಿನವರೆಗೆ ಏನೆಲ್ಲಾ ನಡೆದಿದೆ, ಅದೆಲ್ಲವೂ ಒಳ್ಳೆಯ ರೀತಿಯಿಂದ ನಡೆದಿದೆ ಎಂದು ಹೇಳಲಾಗುವುದಿಲ್ಲ. ಎಲ್ಲವೂ ಚೌಕಾಸಿಯ ಹಿನ್ನೆಲೆಯಲ್ಲಿಯೇ ನಡೆದಿರುವಂತದ್ದು. ಹಾಗಾಗಿ ಕವಿ ಹೀಗೆ ಹೇಳುತ್ತಾರೆ. 'ಈವರೆಗೆ ನಡೆದಿದ್ದಲ್ಲ ಚೌಕಾಸಿಯ ಬಿಟ್ಟು' ಎಂದು.

ಕವಿಯು ರಾಜಕೀಯ ವ್ಯವಸ್ಥೆ ಒಂದೇ ತೆರನಾಗಿರುವುದಿಲ್ಲ ಎಂದು ಹೇಳುತ್ತಾರೆ. ಆ ರಾಜಕೀಯದಲ್ಲಿ ಹಲವಾರು ರೀತಿಯಲ್ಲಿ ಮಾರ್ಪಾಡುಗಳು ನಡೆಯುತ್ತಿರುತ್ತದೆ.

**ಹೆದ್ದಾರಿಗಳೆಲ್ಲ ಕವಲುದಾರಿಗಳಾಗಿ ಪರಿವರ್ತಿಸಿದೆ**
**ಮುಚ್ಚುಮರೆಯಲಿ ಸಾಗಿದೆ ಎಲ್ಲ ಬೇಹಾರ;**
**ಬೆಕ್ಕು ಇಲಿಗೆ ಬಿಡದೆ ಶೋಧ ನಡೆಸಿದಂತಾಗಿದೆ**
**ಕಟ್ಟು ಕಟ್ಟಳೆಗಳೆಲ್ಲ ಅನುಭವಿಸಿರೆ ಮುಜಗರ.**

**(ಪು.ಸಂ.೭೯ಲ)**

ರಾಜಕೀಯದಲ್ಲಿ ಹೇಗೆಲ್ಲಾ ಮಾರ್ಪಾಡುಗಳಾಗಿವೆ ಎಂದರೆ ಹೆದ್ದಾರಿಗಳೆಲ್ಲಾ ಕವಲುದಾರಿಗಳಾಗಿವೆ ಎನ್ನುತ್ತಾರೆ. ಅಂದರೆ ಸತ್ಯದ ದಾರಿ, ಉತ್ತಮಮಾರ್ಗದಲ್ಲಿ ಇಂದು ರಾಜಕೀಯ ವ್ಯವಸ್ಥೆಯ ಚಟುವಟಿಕೆಗಳು ನಡೆಯುತ್ತಿಲ್ಲ. ಇಂದು ಅಧಿಕಾರಿಗಳು ಸಾಗುವ ದಾರಿ ಉತ್ತಮ ರೀತಿಯಿಂದ ಕೂಡಿದುದಲ್ಲ. ಅಂದರೆ ಪ್ರಮಾಣೀಕತೆ, ನಿಷ್ಠೆ ಎಂಬುವಂತದ್ದು.ಅವರ ರಾಜಕೀಯ ಜೀವನದಲ್ಲಿ ಇಲ್ಲ, ಹಾಗಾಗಿ ಅಡ್ಡದಾರಿಯನ್ನು ಹಿಡಿದಿದ್ದಾರೆ. ನೇರ ನಡೆ ರಾಜಕಾರಣಿಗಳಲ್ಲಿ ಇಲ್ಲವಾಗಿದೆ. ಹೆದ್ದಾರಿ ಅಂದರೆ ನಿಷ್ಠೆ, ಪ್ರಾಮಾಣೀಕತೆ ನೆಲೆಯಲ್ಲಿರುವುದು,

ಅಷ್ಟ ದಾರಿ ಇದು ಇಷ್ಟಗಳನ್ನು ಬಿಟ್ಟು ತಪ್ಪು ಮಾರ್ಗ ಅನುಸರಿಸುವುದು ಎಂದು ಅರ್ಥೈಸಿಕೊಳ್ಳಬಹುದು.

ರಾಜಕೀಯದಲ್ಲಿ ಎಲ್ಲವೂ ಮುಚ್ಚು ಮರೆಯಲ್ಲಿ ಸಾಗಿದೆ ಎನ್ನುತ್ತಾರೆ. ಬೆಕ್ಕು ಇಲಿಗಳ ರೀತಿಯ ಜನರಿದ್ದಾರೆ, ಅಧಿಕಾರಿಗಳಿದ್ದಾರೆ, ಕದ್ದುತಿನ್ನುವಂತವರೆ ಹೆಚ್ಚು , ಇಂತವರನ್ನು ನೋಡಿದರೆ ಕಾನೂನುಗಳೇ, ಕಟ್ಟುಕಟ್ಟಳೆಗಳೇ ಮುಜುಗರಕ್ಕೆ ಒಳಪಡುತ್ತವೆ.

ಎಲ್ಲಾ ಕಡೆ ದ್ವಂದ್ವಗಳೇ ತುಂಬಿದೆ. ಈ ರಾಜಕೀಯದಲ್ಲಿ ಆತ್ಮ ಕಲಹವಿದೆ. ಬಲವಿಲ್ಲದವರು ಬಲಗೊಳ್ಳಲು ಈ ವ್ಯವಸ್ಥೆಯಲ್ಲಿ ಆಗದು, ಆಗುವುದಿದ್ದರೂ ಅದಕ್ಕೆ ಅಡ್ಡಿಪಡಿಸುವುವವರೇ ಹೆಚ್ಚು.

ಕವಿ ಜನತಾ ಜನಾರ್ಧನ ಅಂತರ್ಧಾನವಾಗಿರಲು ದೀಪದಾರಿ. ಎಲ್ಲಿ ತರಲಿ ಸರಳ ಭವಿತವ್ಯಕೆ ಎನ್ನುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ರಾಜಕೀಯ ವ್ಯವಸ್ಥೆ ಕೂಡಿದೆ. ಇದರ ಕುರಿತು ವಿಷಾದದ ಭಾವ ಮೂಡುತ್ತದೆ.

**'ನಂಬಿಕಸ್ಥ ನಾಯಿ'** ಕವನವು ರಾಜಕೀಯ ನೆಲೆಯಲ್ಲಿ ಕಂಡು ಬರುವುದರ ಜೊತೆಗೆ 'ನಂಬಿಕೆ' ಎಂಬುದರ ಕುರಿತು ತಿಳಿಸುತ್ತಾರೆ. ನಂಬಿಕೆಗೆ ಹೆಸರುವಾಸಿ ನಾಯಿ ಎಂಬುದರ ಅರ್ಥದೊಂದಿಗೆ ಕವಿ ಕವಿತೆಯಲ್ಲಿ ರಾಜಕೀಯ ವ್ಯವಸ್ಥೆಯ ಚಿತ್ರಣವನ್ನು ಅನಾವರಣಗೊಳಿಸುವಂತದ್ದನ್ನು ಕಾಣಬಹುದು.

**ನಾಯಿನಂಬಿಕೆಗೆ ನಿಯತ್ತಿಗೆ ಹೆಸರುವಾಸಿ,**
**ನಾಯಿ ನಂಬಿಕಸ್ಥ ಪ್ರಾಣಿ, ಸ್ವಲ್ಪ ಸುಮ್ಮನೆ ಕೇಳಿ**
**ಬಾಲ ಅಲ್ಲಾಡಿಸುವುದನ್ನು ಮಾತ್ರ ಬಿಡದಲ್ಲ ಸ್ವಾಮಿ**
**ಅನ್ನ ಹಾಕಿದವರೆಲ್ಲ ಇದರ ಒಡೆಯರು**
**ಒಡೆಯರು ಬದಲಾದಂತೆ ನಂಬಿಕೆಯ ಬದಲು.**

**(ಪು.ಸಂ.೨೩೮)**

ನಾಯಿಗೆ ಯಾರು ಅನ್ನ ಹಾಕುವವರು ಅವರೆಲ್ಲಾ ಒಡೆಯರು, ಒಡೆಯರು ಬದಲಾದರೆ ಅವರ ಮೇಲೆ ಆ ಪ್ರಾಣಿಯ ನಂಬಿಕೆ ಕೂಡ ಬದಲಾಗುತ್ತದೆ. ಅಂದರೆ ಸಮಾಜದಲ್ಲಿ ನಂಬಿಕಸ್ಥ ನಾಯಿಯ ರೀತಿಯ ಮನುಷ್ಯರು ಇರುವುದು ಕಡಿಮೆ. ಹಾಗೆಯೇ ಒಳ್ಳೆಯ ಒಡೆಯರುಗಳಿರುವುದು ಕಡಿಮೆ ಎಂಬುದನ್ನು ಅಧಿಕಾರಗಳು, ಅಧಿಕಾರಿಗಳ ನೆಲೆಯಲ್ಲಿ ಅರ್ಥೈಸಿಕೊಳ್ಳಬಹುದು.

ಮನುಷ್ಯರಿಗಿಂತ ಪ್ರಾಣಿಗಳೇ ಮೇಲು. ನಂಬಿಕೆಗೆ ನಾಯಿ ಎಂಬ ಮಾತಿನಂತೆ ಅದು ನಿಜ. ನಂಬಿಕಸ್ಥ ಜನರು ಸಮಾಜದಲ್ಲಿ ವಿರಳವಾಗಿದ್ದಾರೆ ಎಂಬುದನ್ನು ಇಲ್ಲಿ ತಿಳಿಯಬಹುದು.

**'ಅಧಿಕಾರ'** ಕವನವು ಅಧಿಕಾರಿ ವರ್ಗವನ್ನು ಕುರಿತು ತಿಳಿಸುತ್ತದೆ ಕವಿ ಈ ಕವಿತೆಯಲ್ಲಿ ಅಧಿಕಾರಿಗಳು ತಮ್ಮ ಅಧಿಕಾರದಲ್ಲಿ ಹೇಗೆಲ್ಲಾ ವರ್ತಿಸುತ್ತಾರೆ ಎಂಬ ಬಗ್ಗೆ ತಮ್ಮ ನಿಲುವನ್ನು ತಾಳಿರುವುದನ್ನು ಗಮನಿಸಬಹುದು. ಕವಿ ಕವಿತೆಯಲ್ಲಿ ಹೀಗೆ ಹೇಳುತ್ತಾರೆ.

**'ಅಧಿಕಾರದಲ್ಲಿರುವವ ಕಂಡರೆ**
**ಹೆದರಿಕೆಯಯ್ಯಾ,**
**ಅವರ ಅಧಿಕಾರಕ್ಕಲ್ಲ ನೋಡಾ;**
**ಹಿಂದಿರುವ ನಿಗೂಢ ಮರ್ಜಿಗೆ**
**ದುರುಪಯೋಗಕ್ಕೆ,**
**ರಕ್ಷಿಸು ತಂದೆ;**
**ಈ ಆತ ತಾಯಿಗಳಿಂದ !**

**(ಪು.ಸಂ.೪೩೩)**

ಸಾಮಾನ್ಯ ಜನತೆಯು ಹೇಳುವ ರೀತಿಯಲ್ಲಿ ಕವಿಯ ಅಭಿಪ್ರಾಯ ಮಂಡನೆಯಾಗಿದೆ. ಸಾಮಾನ್ಯ ಮನುಷ್ಯ ಅಧಿಕಾರದಲ್ಲಿರುವವರ ಕಂಡು ಹೆದರಿಕೆಯಯ್ಯಾ ಎನ್ನುತ್ತಾನೆ. ಅಂದರೆ ಆತನನ್ನು ನೋಡಿದರೆ ಹೆದರಿಕೆ ಎಂಬತ್ತಲ್ಲ, ಅವನ ಅಧಿಕಾರವನ್ನು ನೋಡಿಯೂ ಅಲ್ಲ, ಅವನ ಅಧಿಕಾರದ ಹಿಂದಿರುವ ನಿಗೂಢವಾದ ಮನಸ್ಥಿತಿಗೆ ಎನ್ನುವಂತದ್ದು. ಆತನು ತನ್ನ ಅಧಿಕಾರವನ್ನು ದುರುಪಯೋಗಕ್ಕೆ ಒಳಪಡಿಸಿಕೊಳ್ಳುವ ಬಗೆಗೆ ಎಂಬುದನ್ನು ಕವಿ ತಿಳಿಸುತ್ತಾರೆ.

ಇಂತಹ ಅಧಿಕಾರಿಗಳಿಂದ, ಅಂತಹ ದುರುಪಯೋಗ ಅಧಿಕಾರದಿಂದ ನಮ್ಮನ್ನು ರಕ್ಷಿಸು ತಂದೆ ಎನ್ನುತ್ತಾರೆ ಕವಿ.

ಅಧಿಕಾರಿ,ಅಧಿಕಾರದ ದರ್ಪ ಮನುಷ್ಯನನ್ನು ಯಾವ ಮಟ್ಟಕ್ಕಾದರೂ ಕೊಂಡೊಯ್ಯುತ್ತದೆ. ಮನುಷ್ಯತ್ವವನ್ನು ಮರೆಯುವಂತೆ ಮಾಡಬಹುದು.

**'ಸರ್ವಾಧಿಕಾರಿ'** ಕವನವು ಸರ್ವಾಧಿಕಾರಿಗಳ ಬಗ್ಗೆ ಅವರ ಸರ್ವಾಧಿಕಾರದ ಕುರಿತು ತಿಳಿಸುತ್ತದೆ. ಕವಿಯು ಕವಿತೆಯಲ್ಲಿ ಸರ್ವಾಧಿಕಾರಿಯ ಧೋರಣೆಯ ನೆಲೆಯನ್ನು ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇದರ ಮುಖೇನ ಅದನ್ನು ವಿರೋಧಿಸುವ ಬಗೆ ಕಾಣಬಹುದು.

**ಅಹಮ್ಮಿನಲಿ ಮರೆಯುವವ**
**ಮುಗ್ಗರಿಸುವನೊಂದು ದಿನ**
**ಬೆಳಕಿಗೆ ಕಣ್ಣ ಬಿಡದ ಪರಿಯು**
**ಸರ್ವಾಧಿಕಾರಿಯ ಅಂತ್ಯ**
**ಬಲು ಹೀನಾಯವದು**
**ಆವರೆಗೆ ನರಳುವುವು ಪಾಯಿಗಳು.**

**(ಪು.ಸಂ.೪೪೪)**

ಅಧಿಕಾರದ ದರ್ಪದಲ್ಲಿ, ಸರ್ವಾಧಿಕಾರಿಯಂತೆ ಮೆರೆಯುವ ವ್ಯಕ್ತಿಗಳು ಸಮಾಜದಲ್ಲಿ ತುಂಬಾ ಇದ್ದಾರೆ. ಅಹಂನಲ್ಲಿಯೇ ಮೆರೆಯುವಂತಹ ವ್ಯಕ್ತಿಗಳನ್ನು ಸಮಾಜದಲ್ಲಿ ಕಾಣಬಹುದು. ಅವರು ಕೊನೆಯವರೆಗೂ ಅದೇ ಅಹಂನಲ್ಲಿಯೇ ಇರಲು ಸಾಧ್ಯವಿಲ್ಲ. ಒಂದಲ್ಲ ಒಂದು ದಿನ ಮುಗ್ಗರಿಸಲೇಬೇಕು. ಅಹಂ ಬಿಟ್ಟು ಹೊರಬರಬೇಕು. ಸಾಮಾನ್ಯನಂತೆ ಇರಲೇಬೇಕು ಎಂಬುದನ್ನು ಮರೆಯಬಾರದು.

ಹೊರಗಿನ ಸಮಾಜಕ್ಕೆ, ಪ್ರಪಂಚಕ್ಕೆ ತನ್ನನ್ನು ತೋರ್ಪಡಿಸಿಕೊಳ್ಳಬೇಕು. ಅದು ಬೆಳಕಿಗೆ ಕಣ್ಣು ಬಿಡದ ರೀತಿಯಿಂದಲ್ಲ. ಎಷ್ಟೆಲ್ಲಾ ದರ್ಪ, ಅಹಂಕಾರದಲ್ಲಿ ಸರ್ವಾಧಿಕಾರಿಯಾಗಿ ಮೆರೆದರೂ ಎಂತಹ ಸರ್ವಾಧಿಕಾರಿಗೂ ಒಂದು ದಿನ ಅಂತ್ಯ ಇದ್ದೆ ಇರುತ್ತದೆ. ಅವನಿಗೂ ಹಾಗೂ ಅವನ ಸರ್ವಾಧಿಕಾರಕ್ಕೂ ಅಂತ್ಯವಿದೆ. ಅದು ಬಲು ಹೀನಾಯವಾದ ರೀತಿಯಲ್ಲಿರುತ್ತದೆ ಎನ್ನುತ್ತಾರೆ ಕವಿ. ಅಲ್ಲಿಯವರೆಗೂ ಅವರ ಅಧೀನದಲ್ಲಿ ಸಾಮಾನ್ಯ ಜನತೆ ನರಳುತ್ತಿರುತ್ತಾರೆ. ಎಂದು ತಿಳಿಸುತ್ತಾ ಕವಿ ತಮ್ಮ ನಿಲುವನ್ನು ಸರ್ವಾಧಿಕಾರಿಗಳ ಕುರಿತು ವ್ಯಕ್ತಪಡಿಸುತ್ತಾರೆ.

ಸರ್ವಾಧಿಕಾರಿಯ ಧೋರಣೆಯ ವ್ಯಕ್ತಿಗಳನ್ನು ಕವಿ ನೋಡಿದ್ದಾರೆ. ಹಾಗಾಗಿ ಅವರ ಬಗೆಗಿನ ಈ ರೀತಿಯ ನಿಲುವನ್ನು ಕವಿತೆಯಲ್ಲಿ ತಂದಿರುವಂತದ್ದು. ಈ ಮೂಲಕ ಸಮಾಜವನ್ನು ಎಚ್ಚರಿಸುವ ಪ್ರಯತ್ನದೊಂದಿಗೆ ಸರ್ವಾಧಿಕಾರಿಯ ಅಂತ್ಯದೊಂದಿಗೆ ಉತ್ತಮ ಸಮಾಜ ನಿರ್ಮಾಣವಾಗುತ್ತದೆ ಎಂಬ ಜಾಗೃತಿಯನ್ನು ಮೂಡಿಸುವುದನ್ನು ಕಾಣಬಹುದು.

"ಸಮಾಜ ಪರವಾದ ಕಾವ್ಯ ರಚನೆಯ ಮುಖ್ಯ ಉದ್ದೇಶ–ಸಾಮಾಜಿಕ ಅನ್ಯಾಯಗಳ ವಿರುದ್ಧ, ವ್ಯಕ್ತಿಗತ ಗತಿಶೀಲತೆಗೆ ತಡೆಯಾಗಿ ನಿಂತ ಪಟ್ಟಭದ್ರ ಶಕ್ತಿಗಳ ವಿರುದ್ಧ ಆಲೋಚನಾ ಕ್ರಮವೊಂದನ್ನು ರೂಪಿಸಿರುವುದು. ಸಮ ಸಮಾಜದ ಸ್ಥಾಪನೆಯ ಹಾದಿಯಲ್ಲಿ ನಡೆಯುವ ಜನಪರ ಹೋರಾಟದಲಿ ಪ್ರಗತಿಪರ ಚಿಂತನೆಯನ್ನು ರೂಪಿಸುವುದು. ಇತ್ತೀಚಿನ ದಲಿತ ಬಂಡಾಯ ಕಾವ್ಯ ವಂತು ರಮ್ಯತೆಯನ್ನು ಒಂದು ಅನಿವಾರ್ಯ ಕಾವ್ಯ ಕ್ರಿಯೆಯಾಗಿ ಬಗೆದದ್ದು.

ಬಹಳ ಮುಖ್ಯ ಆಯಾಮವಾಗಿದೆ. ರಾ? ಅವರ ಕಾವ್ಯ ಮುಖ್ಯವಾಗಿ ಈ ರಮ್ಯ ಗಾಣ ?ನ್ನೇ ಉದ್ದಕ್ಕೂ ಕಾಯ್ದುಕೊಂಡಿವೆ. ತಾವು ಕಾವ್ಯ ಬರೆಯಲು ಆರಿಸಿಕೊಂಡ ವಸ್ತುವಿಗೆ ರಮ್ಯತೆ ತಕ್ಕ ರೂಪವನ್ನು ಸಹೃದಯತ್ವವನ್ನು ತಂದುಕೊಡಬಲ್ಲದೆಂಬುದನ್ನು ಈ ಕವಿ ಬಲ್ಲರು".

**'ಸರ್ವಾಧಿಕಾರಿ'** ಕವನವು ಸರ್ವಾಧಿಕಾರಿಗಳ ಬಗ್ಗೆ ಅವರ ಸರ್ವಾಧಿಕಾರದ ಕುರಿತು ತಿಳಿಸುತ್ತದೆ. ಕವಿಯು ಕವಿತೆಯಲ್ಲಿ ಸರ್ವಾಧಿಕಾರಿಯ ಧೋರಣೆಯ ನೆಲೆಯನ್ನು ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಇದರ ಮುಖೇನ ಅದನ್ನು ವಿರೋಧಿಸುವ ಬಗೆ ಕಾಣಬಹುದು.

**ಅಹಮ್ಮಿನಲಿ ಮೆರೆಯುವವ**
**ಮುಗ್ಗಿರಿಸುವನೊಂದು ದಿನ**
**ಬೆಳಕಿಗೆ ಕಣ್ಣು ಬಿಡದ ಪರಿಯು,**
**ಸರ್ವಾಧಿಕಾರಿಯ ಅಂತ್ಯ**
**ಬಲು ಹೀನಾಯವದು**
**ಆವರೆಗೆ ನರಳುವುವು ಪಾಯಿಗಳು,**

**(ಪು.ಸಂ೪೪೪)**

ಅಧಿಕಾರದ ದರ್ಪದಲ್ಲಿ, ಸರ್ವಾಧಿಕಾರಿಯಂತೆ ಮೆರೆಯುವ ವ್ಯಕ್ತಿಗಳು ಸಮಾಜದಲ್ಲಿ ತುಂಬಾ ಇದ್ದಾರೆ. ಅಹಂ ನಲ್ಲಿಯೇ ಮೆರೆಯುವಂತಹ ವ್ಯಕ್ತಿಗಳನ್ನು ಸಮಾಜದಲ್ಲಿ ಕಾಣಬಹುದು. ಅವರು ಕೊನೆಯವರೆಗೂ ಅದೇ ಅಹಂನಲ್ಲಿಯೇ ಇರಲು ಸಾಧ್ಯವಿಲ್ಲ. ಒಂದಲ್ಲ ಒಂದು ದಿನ ಮುಗ್ಗರಿಸಲೇ ಬೇಕು. ಅಹಂ ಬಿಟ್ಟು ಹೊರಬರಬೇಕು. ಸಾಮಾನ್ಯನಂತೆ ಇರಲೇ ಬೇಕು ಎಂಬುದನ್ನು ಮರೆಯಬಾರದು.

ಹೊರಗಿನ ಸಮಾಜಕ್ಕೆ, ಪ್ರಪಂಚಕ್ಕೆ ತನ್ನನ್ನು ತೋರ್ಪಡಿಸಿಕೊಳ್ಳಬೇಕು. ಬೆಳಕಿಗೆ ಕಣ್ಣು ಬಿಡದ ರೀತಿಯಿಂದಲ್ಲ, ಎಷ್ಟೆಲ್ಲಾ ದರ್ಪ, ಅಹಂಕಾರದಲ್ಲಿ ಸರ್ವಾಧಿಕಾರಿಯಾಗಿ ಮೆರೆದರೂ ಎಂತಹ ಸರ್ವಾಧಿಕಾರಿಯೂ ಒಂದು ಒಂದು ದಿನ ಅಂತ್ಯ ಇದ್ದೇ ಇರುತ್ತದೆ. ಅವನಿಗೂ ಹಾಗೂ ಅವನ ಸರ್ವಾಧಿಕಾರಿಕ್ಕೂ ಅಂತ್ಯವಿದೆ. ಅದು ಬಲು ಹೀನಾಯವಾದ ರೀತಿಯಲ್ಲಿರುತ್ತದೆ ಎನ್ನುತ್ತಾರೆ ಕವಿ. ಅಲ್ಲಿಯವರೆಗೂ ಅವರ ಅಧೀನದಲ್ಲಿ ಸಾಮಾನ್ಯ ಜನತೆ ನರಳುತ್ತಿರುತ್ತಾರೆ ಎಂದು ತಿಳಿಸುತ್ತಾ ಕವಿ ತಮ್ಮ ನಿಲುವನ್ನು ಸರ್ವಾಧಿಕಾರಿಗಳ ಕುರಿತು ವ್ಯಕ್ತ ಪಡಿಸುತ್ತಾರೆ.

ಸರ್ವಾಧಿಕಾರಿಯ ಧೋರಣೆಯ ವ್ಯಕ್ತಿಗಳನ್ನು ಕವಿ ನೋಡಿದ್ದಾರೆ. ಹಾಗಾಗಿ ಅವರ ಬಗೆಗಿನ ಈ ರೀತಿಯ ನಿಲುವನ್ನು ಕವಿತೆಯಲ್ಲಿ ತಂದಿರುವಂತದ್ದು. ಈ ಮೂಲಕ

ಸಮಾಜವನ್ನು ಎಚ್ಚರಿಸುವ ಪ್ರಯತ್ನದೊಂ೯ ಗೆ ಸರ್ವಾಧಿಕಾರಿಯ ಅಂತ್ಯದೊಂದಿಗೆ ಉತ್ತಮ ಸಮಾಜ ನಿರ್ಮಾಣವಾಗುತ್ತದೆ ಎಂಬ ಜಾಗೃತಿಯನ್ನು ಮೂಡಿಸುವುದನ್ನು ಕಾಣಬಹುದು.

ಸರ್ವಾಧಿಕಾರಿಯ ಧೋರಣೆ ಹಿಂಸಾತ್ಮಕವಾದುದು. ಇಲ್ಲಿ ಅಧಿಕಾರದ ಅಮಲಿನಲ್ಲಿ ಮನುಷ್ಯತ್ವ ಕಣ್ಮರೆಯಾಗಿರುತ್ತದೆ ಎಂಬುದನ್ನು ಗಮನಿಸಬಹುದು.

**'ಹಿಂಸೆ'** ಕವನವು ಹಿಂಸಾರಾಜಕೀಯ ಜೀವನದ ಕುರಿತು ತಿಳಿಸುತ್ತದೆ. ಕವಿಯು ಇಲ್ಲಿ ರಾಜಕೀಯದಲ್ಲಿ ಹಿಂಸಾ ನೆಲೆಯ ಕುರಿತು ಚರ್ಚಿಸಿರುವುದನ್ನು ಕಾಣಬಹುದು. ಆ ಮೂಲಕ ರಾಜಕೀಯದಲ್ಲಿನ ಹಿಂಸಾ ಮನೋಭಾವಕ್ಕೆ ಕೊನೆಯಾಗಬೇಕು. ಆಗ ಬದುಕು ಸುಗಮ ಎಂಬ ಆಶಯವನ್ನು ಇಲ್ಲಿ ತಂದಿರುವುದನ್ನು ಕಾಣಬಹುದು.

**ಕಾರಣವೇನೇ ಇರಲಿ ಮಾರಣ ಹೋಮ**
**ಮಾತ್ರ ಜರುಗಕೂಡದು;**
**ನೆಮ್ಮದಯ ನಿಟ್ಟುಸಿರಿನ ಸಕಲ ಬೀಜಗಳು**
**ಇಲ್ಲಿಂದ ಹೋದಾಗಲೆ ಬೆಳಕು;**
**ಹಿಂಸಾರಾಜಕೀಯದ ಕೆನ್ನೀರಿನ ಚೆಲ್ಲಾಟಕೆ**
**ತೆರೆ ಬಿದ್ದಾಗಲೇ ತೃಪ್ತ ಬದುಕು !**

**(ಪು.ಸಂ.೯೫೦)**

ರಾಜಕೀಯದ ಜೀವನದಲ್ಲಿ ಕಾರಣಗಳೇನೇ ಇದ್ದರೂ ಅಲ್ಲಿ ಹಿಂಸೆಯ ಮಾರಣ ಹೋಮ ಮಾತ್ರ ನಡೆಯಬಾರದು ಎನ್ನುತ್ತಾರೆ ಕವಿ. ಈ ಒಂದು ವ್ಯವಸ್ಥೆಯಲ್ಲಿ ನೆಮ್ಮದಿಯಿಂದ ನಿಟ್ಟುಸಿರು ಬಿಡಲು ಸಾಧ್ಯವಿಲ್ಲ. ಅದು 'ಬೇಕೆಂದರೆ' ಈ ವ್ಯವಸ್ಥೆಯಿಂದ ಹೊರ ಬರಬೇಕು. ಹಿಂಸಾರಾಜಕೀಯದ ಒಂದು ಕೆಟ್ಟ ವ್ಯವಸ್ಥೆಗೆ ತೆರೆ ಬಿದ್ದಾಗಲೇ ತೃಪ್ತ ಬದುಕು ಸಾಧ್ಯ. ಇಲ್ಲವಾದಲ್ಲಿ ಅತೃಪ್ತ ಬದುಕು.

**'ಮೇವು'** ಕವನವು ಇಂದಿನ ರಾಜಕೀಯದ ವ್ಯವಸ್ಥೆಯು ಹದಗೆಟ್ಟಿರುವ ಪರಿಸ್ಥಿತಿಯನ್ನು ತಿಳಿಸುತ್ತದೆ. ಕವಿ ಇಲ್ಲಿ ರಾಜಕೀಯ ವ್ಯವಸ್ಥೆಯಲ್ಲಿನ ದಂಧೆ, ಮುಖವಾಡದ ಜನತೆ, ಸ್ವಾರ್ಥಿ ಮನಸ್ಥಿತಿವುಳ್ಳಂತಹರನ್ನು ಕುರಿತು ಹೇಳುತ್ತಾರೆ.

'ಮೇವು' ಎಂಬ ಶೀರ್ಷಿಕೆಯೊಂದಿಗೆ ಕವಿ ಸೊಗಸಾಗಿ ಹೇಳುತ್ತಾರೆ. ಮೇವು ಮೇಯುವುದು ಎಂದು ಪ್ರಾಣಿಗಳಿಗೆ ಹೇಗೆ ಹೇಳುತ್ತೆವೆಯೋ ಹಾಗೆ ರಾಜಕೀಯ ವ್ಯವಸ್ಥೆಯಲ್ಲಿ ಪ್ರಾಣಿಗಳಂತಹ ಮನುಷ್ಯ ರೂಪದ ಧನರಾಕ್ಷಸರನ್ನು ಕಾಣಬಹುದು. ಅಂತವರನನು ಕುರಿತಾದುದು ಈ ಕವಿತೆ.

ಸಕತ್ತಾಗಿ ಹುಲ್ಲು ಬೆಳೆದಿದೆ ಎಂದರೆ ಹೇಗೆ ಬಾಲ ಹಲ್ಲಾಡಿಸುತ್ತಾ ಜೊಲ್ಲು ಸುರಿಸಿ ಹೋಗುವ ಪ್ರಾಣಿಗಳಿವೆ. ಹಾಗೆ ಮನುಷ್ಯ ರೂಪದಲ್ಲಿ ಕಂಡು ಬರುತ್ತಾರೆ. ಮೋಟು ಕಾಣದ ಹಾಗೆ ಮೇದು ಅಲ್ಲೇ ತೊಪ್ಪೆ ಕೆಡಗುವಂತಹವರು ಇದ್ದಾರೆ. ಎಲ್ಲವನ್ನು ಕಬಳಿಸಿ ಅಲ್ಲೇ ಕೆಡುಕನ್ನು ಮಾಡುವ ಮಂದಿಯ ಕುರಿತಾಗಿ ಹೇಳುತ್ತಾರೆ. ಅಂತವರನ್ನು ದಂಡಿಸುವುದು, ಶಿಕ್ಷಿಸುವುದು ಹೇಗೆ ಎನ್ನುತ್ತಾರೆ ಕವಿ.

**ಆ ಈ ಹೊಲಗಳ ಅರಸುತ್ತವೆ ಸ್ವಾಮಿ**
**ನಡುವೆ ಪಾಮೀಲಾಗುವ ಮಂದಿ;**
**ಮೇದು ಮೇಕೆಯ ಬಾಯಿಗೆ ಒರಸುತ್ತವೆ.**
**ಹಣ್ಣು ನುಣುಚಿ ಸಿಕ್ಕಿ ಕೊಳ್ಳುತ್ತವೆ ಸಿಪ್ಪೆ !**

**(ಪು.ಸಂ.೧೩೨)**

ಸಮಾಜದಲ್ಲಿ ಬೇಲಿ ಹಾರಿ ಬರುವ ಹಗ್ಗ ಕಿತ್ತ ಗೂಳಿಗಳ ರೀತಿಯ ಮನುಷ್ಯರಿದ್ದಾರೆ. ಅವರುಗಳನ್ನು ದಂಡಿಸಲು ಆಗುವುದಿಲ್ಲ. ತಮ್ಮ ತಪ್ಪುಗಳನ್ನು ಬೇರೊಬ್ಬರ ಮೇಲೆ ಹಾಕಿ ತಾವು ನುಣಚಿಕೊಳ್ಳುವ ಫಲಾಯನ ಬುದ್ದಿ ಇರುವಂತವರು. ಇವರನ್ನು ಕವಿ ಹರಿಣ ಮುಖದ ಹುಲಿಗಳು ಎನ್ನುತ್ತಾರೆ.

"ಸಮಾಜ ಪರವಾದ ಕಾವ್ಯ ರಚನೆಯ ಮುಖ್ಯ ಉದ್ದೇಶ ಸಾಮಾಜಿಕ ಅನ್ಯಾಯಗಳ ವಿರುದ್ಧ, ವ್ಯಕ್ತಿಗತ ಗತಿಶೀಲತೆಗೆ ತಡೆಯಾಗಿ ನಿಂತ ಪಟ್ಟಭದ್ರ ಶಕ್ತಿಗಳ ವಿರುದ್ದ ಆಲೋಚನಾ ಕ್ರಮವೊಂದನ್ನು ರೂಪಿಸಿರುವುದು, ಸಮ ಸಮಾಜದ ಸ್ಥಾಪನೆಯ ಹಾದಿಯಲ್ಲಿ ನಡೆಯುವ ಜನಪರ ಹೋರಾಟದಲ್ಲಿ ಪ್ರಗತಿ ಪರ ಚಿಂತನೆಯನ್ನು ರೂಪಿಸುವುದು,ಇತ್ತೀಚಿನ ದಲಿತ ಬಂಡಾಯ ಕಾವ್ಯವಂತು ರಮ್ಯತೆಯನ್ನು ಒಂದು ಅನಿವಾರ್ಯ ಕಾವ್ಯಕ್ರಿಯೆಯಾಗಿ ಬಗೆದದ್ದು ಬಹಳಮುಖ್ಯ ಆಯಾಮವಾಗಿದೆ. ರಾಗೌ ಅವರ ಕಾವ್ಯ ಮುಖ್ಯವಾಗಿ ಈ ರಮ್ಯಗಾಣವನ್ನೇ ಉದ್ಧಕ್ಕೂ ಕಾಯ್ದುಕೊಂಡಿದೆ. ತಾವು ಕಾವ್ಯ ಬರೆಯಲು ಆರಿಸಿಕೊಂಡ ವಸ್ತುವಿಗೆ ರಮ್ಯತೆ ತಕ್ಕ ರೂಪವನ್ನು ಸಹೃದಯತ್ವವನ್ನು ತಂದುಕೊಡಬಲ್ಲದೆಂಬುದನ್ನು ಈ ಕವಿ ಬಲ್ಲರು"

ಹೀಗೆ ಸಮಾಜಮುಖಿ ಧೋರಣೆಗಳನ್ನು ಒಳಗೊಂಡಿರುವ ರಾಗೌ ಅವರ ಕವಿತೆಗಳಲ್ಲಿ ರಾಜಕೀಯ ವ್ಯವಸ್ಥೆಯ ಹದಗೆಟ್ಟ ಪರಿಸ್ಥಿತಿಯನ್ನು ತಿಳಿಸುವುದರ ಜೊತೆಗೆ ಟೀಕೆ, ಖಂಡನೆ ವಿಡಂಬನೆಗಳನ್ನು ಸಹ ಕಾಣಬಹುದು. ಮೇಲೆ ತಿಳಿಸಿರುವ ಕವಿತೆಗಳಲ್ಲಷ್ಟೇ ಅಲ್ಲದೆ ಇನ್ನೂ ಅನೇಕ ಕವಿತೆಗಳಲ್ಲಿ ರಾಜಕೀಯ ಅಂಶಗಳು ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

ಅಡಿ ಟಿಪ್ಪಣಿ:

೧) ಡಾ. ರಾಗೌ ಸಮಗ್ರಕಾವ್ಯ , ಮುನ್ನುಡಿ–ಪ್ರೊ. ಶಿವರಾಮು, ಕಾಡನಕುಪ್ಪೆ– ಪುಟ ಸಂಖ್ಯೆ–೧೦, ವಿಜಯಲಕ್ಷ್ಮೀ ಪ್ರಕಾಶನ–ಮೈಸೂರು.

## ಅಧ್ಯಾಯ-೪.೨

### ಜಾತಿ ಮತಕ್ಕೆ ಸಂಬಂಧಿಸಿದ ಕವಿತೆಗಳು.

ಡಾ. ರಾಗೌ ಅವರು ತಮ್ಮ ಕಾವ್ಯಗಳಲ್ಲಿ ಮನುಷ್ಯನ ಬದುಕಿನೊಂದಿಗೆ ಜಾತಿ ಮತ ಎಂಬವು ಹೇಗೆ ಸಂಬಂಧ ಹೊಂದಿವೆ ಎಂಬುದ ಕುರಿತು ತಿಳಿಸುತ್ತಾರೆ.

ಸಮಾಜದಲ್ಲಿ ಜಾತಿ ಎನ್ನುವಂತದ್ದು ಕಿತ್ತೊಗೆಯಲಾರದಷ್ಟು ಬೇರೂರಿಬಿಟ್ಟಿದೆ. ಇಲ್ಲಿ ಜಾತಿ, ವರ್ಗ ವರ್ಣ ಪರಿಕಲ್ಪನೆಗಳ ಕುರಿತಾಗಿ ತಿಳಿಸಿದ್ದಾರೆ. ಅವುಗಳು ಹೇಗೆ ಸಮಾಜದಲ್ಲಿ ತಮ್ಮ ಪರಿಣಾಮ ಬೀರುತ್ತಿವೆ ಎಂಬುದನ್ನು ಇಲ್ಲಿ ತಿಳಿಸಲಾಗಿದೆ. ಜಾತಿಯ ಬಿಗಿ ನಿಲುವು, ಜಾತಿ ವ್ಯವಸ್ಥೆಯ ನಿಕೃಷ್ಟತೆ, ಮೇಲು-ಕೀಳು ಎಂಬ ಭಾವನೆ, ಮತಭ್ರಾಂತನಾದ ಮಾನವ, ದುರ್ಬಲರ ನೋವು, ಜಾತಿಯ ತುಳಿತಕ್ಕೆ ಬಲಿಯಾದಂತವರು, ದುರ್ಬಲರ ದುಃಖ ದುಮ್ಮಾನಗಳು, ಶೋಷಣಾ ಪ್ರವೃತ್ತಿ, ಹೊಸ ಅಸ್ಥಿತ್ವಕ್ಕೆ ಸಿದ್ಧತೆ, ಭವಿಷ್ಯದ ಬಗೆಗಿನ ಧನಾತ್ಮಕ ಧೋರಣೆ ಹೀಗೆ ಅನೇಕ ಅಂಶಗಳು ಅಧ್ಯಯನದಲ್ಲಿ ಒಳಗು ಮಾಡಿಕೊಂಡಿದೆ. ಈ ಅಂಶಗಳನ್ನು ಕುರಿತಂತೆ ಕಾವ್ಯಗಳಲ್ಲಿ ತಿಳಿಸಿರುವುದು. ಇದನ್ನು ಪ್ರಸ್ತುತ ಈ ಭಾಗದಲ್ಲಿ ಅನಾವರಣಗೊಳಿಸಲಾಗಿದೆ.

**'ಮತ'** ಕವನದಲ್ಲಿ ಮತಗಳಲ್ಲಿನ ಕೆಟ್ಟ ಭಾವನೆಗಳನ್ನು ಒಳಗೊಂಡಿರುವುದು ಕುರಿತು ಕವಿ ಹೇಳುತ್ತಾರೆ. ಹೀಗೆ

**ಮತ ಮತವೆಂದು ಮಥಿಸುವರೇಕೋ ಕಾಣೆ**
**ಮತವರಿದೆ ಮೈದೋರದೆ ಮಾನವೀಯತೆ?**
**ಅಫೀಮು ತಿಂದವರಿಗೆ ಜಾಮೂನು ಹಿಡಿಸಿತೆ**
**ಹತವಾಗದೆ ಮತ ನಿದ್ರಿಸಳಣ್ಣಾ ಭರತ ಮಾತೆ !**

ಆ ಮತ ಈ ಮತ ಎಂಬ ಅನೇಕ ಕೆಟ್ಟ ಭಾವನೆಗಳನ್ನು ಒಳಗೊಂಡಿರುವಂತಹ ಜನತೆಗೆ ಕವಿಯ ಕಿವಿಮಾತು ಈ ರೀತಿ ಇದೆ. ಕವಿಯು ಮತೀಯ ನೆಲೆಯಲ್ಲಿ ದೇಶದ ಪ್ರಗತಿಗೆ ಹಿನ್ನಡೆಯಾಗುವುದರ ಕುರಿತು ಕಾಳಜಿ ಇದೆ. ಇಂತಹ ಒಂದು ಮತೀಯ ಧೋರಣೆ ದೇಶದ ವಿನಾಶಕ್ಕೆ ಕಾರಣೀಭೂತವಾಗುವ ಒಂದು ಅಮಾನುಷ ಪ್ರಕ್ರಿಯೆ ಎಂಬುದನ್ನು ತಿಳಿಯಬಹುದು.

ಮತ, ಮತಗಳೆಂದು ಅದನ್ನೇ ಮುಖ್ಯವಾಗಿಟ್ಟುಕೊಂಡು ಜಾತಿ-ಮತಗಳ ಬಗ್ಗೆ ಹೆಚ್ಚಾಗಿ ಗಮನಕೊಡುವಂತವರು ಅನೇಕ ಮಂದಿ ನಮ್ಮ ಸಮಾಜದಲ್ಲಿದ್ದಾರೆ. ಮತ ಎಂಬುದನ್ನು ಬಿಟ್ಟು ಬಿಡಿ, ಅದನ್ನು ಬಿಟ್ಟು ಮಾನವೀಯತೆಯನ್ನು ಹೊಂದಿರಿ. ಮತ ಎಂಬುದು ಇರದೆ

ಮಾನವೀಯತೆ ಎಂಬುದು ಇರುವುದಕ್ಕಾಗುವುದಿಲ್ಲವೆ? ಎಂದ ಪ್ರಶ್ನಿಸಿರುವುದನ್ನು ಕಾಣಬಹುದು. ಕವಿಯ ಆಶಯ ಮತೀಯ ಬಿಟ್ಟು ಹೊರಬನ್ನಿ. ಮಾನವೀಯಯತೆಯತ್ತ ಮುನ್ನುಗ್ಗಿ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಈ ಜಾತಿ ಮತ ಎಂಬುವಂತದ್ದು ಹತವಾಗುವ ತನಕ ನಮ್ಮ ಭಾರತಮಾತೆ ನಿಶ್ಚಿಂತೆಯಿಂದ ನಿದ್ರಿಸಲಾರಳು ಎನ್ನುತ್ತಾರೆ. ಭಾರತಮಾತೆಗೆ ಜಾತಿ-ಮತ ಎಂಬಂತಹ ಗಲಭೆ ಗೋಜಲುಗಳು ಬೇಡವಾಗಿದೆ. ಆಕೆಯು ನಿಶ್ಚಿಂತೆಯಿಂದ ಇರಬೇಕೆಂದರೇ ಜಾತಿ-ಮತ ಎಂಬುದು ನಶಿಸಬೇಕು ಎನ್ನುವುದನ್ನು ಕಾಣಬಹುದು.

ಜಾತಿ-ಮತ ಎಂಬ ಮೌಢ್ಯವನ್ನು ಮೊದಲು ಕಿತ್ತೊಗೆಯಬೇಕು. ಮಾನವೀಯತೆ ನೆಲೆಯನ್ನು ಬದ್ದವಾಗಿ ನೆಲೆಯೂರಿಸಬೇಕು.

**'ಮತ'** ಕವನವು ಮತಭ್ರಾಂತನಾಗಿ ಅದರಲ್ಲೇ ಮುಳುಗಿರುವ ಮನುಷ್ಯರನ್ನು ಕುರಿತು ತಿಳಿಸುತ್ತದೆ. ಕವಿಯೂ ಮತಭ್ರಾಂತಿಗಳು ತಮ್ಮ ಮತೀಯ ನಿಲುವುಗಳನ್ನು ಹೇಗೆ ಸಮಾಜದಲ್ಲಿ ಹರಡಿದ್ದಾರೆ ಎಂಬುದನ್ನು ತಿಳಿಸುವುದರ ಜೊತೆಗೆ ಅದರಿಂದ ಸಮಾಜದ ಪರಿಸ್ಥಿತಿಯ ಬಗ್ಗೆ ನಮಗೆ ಕಾಳಜಿ ಮೂಡಿಸುವುದರ ಕುರಿತು ತಿಳಿಸುತ್ತಾರೆ. ಕವಿ ಮತ ಕವಿತೆಯಲ್ಲಿ ಹೀಗೆ ಹೇಳುತ್ತಾರೆ.

**ಮತ ಭ್ರಾಂತನಾಗಿ ಮನುಜ**
**ಮತಿಯ ಮಾರಿಕೊಂಡರೆ;**
**ಕೀಲು ತಪ್ಪಿದ ಕೀಲುಗುದುರೆಯಂತೆ**
**ಧರೆ ಗುರುಳದೆ ಕಡೆಗೆ?**
**ಪತನವಪ್ಪುವುದು ಪಥ**
**ಕೆರಳಿ ಮೂಲಭೂತ ಭೂತ;**
**ಕಂಡುಕೊಳ್ಳದಿರೆ ಮತಕೆ ಪರ್ಯಾಯವನು**
**ಉದ್ವಿಗ್ನ ಸಮುದಾಯದ ಚಿತ್ತ !**

**(ಪು.ಸಂ.೫೭೧)**

ಮತಭ್ರಾಂತನಾಗಿ ಮನುಷ್ಯ ತನ್ನ ಬುದ್ದಿಯನ್ನು ಮಾರಿಕೊಳ್ಳುತ್ತಿರುವ ಪರಿಸ್ಥಿತಿ ಇಂದು ನಮ್ಮ ಮುಂದಿದೆ. ನಾವು ಅದನ್ನು ದಿನನಿತ್ಯ ಕಾಣುತ್ತಿದ್ದೇವೆ. ಯಾವುದೋ ಮತ ಮೌಢ್ಯದಲ್ಲಿ ಸಿಕ್ಕಿ ಮನುಷ್ಯ ದಾರಿ ತಪ್ಪುತ್ತಿದ್ದಾರೆ. ಕೊನೆಗೆ ಅದರಿಂದ ಒಳಿತಂತು ಇಲ್ಲ, ಕೆಡುಕೇ ಆಗುವುದು. ಕೀಲು ತಪ್ಪಿದ ಕೀಲುಗುದುರೆಯಂತೆ ಕೆಳಗೆ ಬೀಳಬೇಕು.

ಈ ಮತ ಎಂಬುದು ಒಂದು ಮೂಲಭೂತ ಭೂತವಾಗಿ ಪರಿಣಮಿಸಿದೆ. ಇದಕ್ಕೆ ಪರ್ಯಾಯವಾದ ಮಾರ್ಗವನ್ನು ಕಂಡುಕೊಳ್ಳಬೇಕು. ಆ ಮುಖೇನ ಮತ ಭ್ರಾಂತಿಗಳನ್ನು ಮತ ಭ್ರಾಂತದಿಂದ ಹೊರತರಬಹುದು. ಇಲ್ಲವಾದಲ್ಲಿ ಇದರ ಪ್ರಸರುವಿಕೆ ತೀವ್ರಗತಿಯಲ್ಲಿ ಸಾಗುತ್ತದೆ. ಇದನ್ನು ನಿರ್ಮೂಲನ ಮಾಡಲು ಮುಂದಾಗಬೇಕು. ಅದರ ಬಗ್ಗೆ ಹೆಚ್ಚಿನ ಆಸ್ಪದ ಕೊಡಬಾರದು.

**'ಮತಭ್ರಾಂತ'** ಕವನವು ಮತಭ್ರಾಂತಿಯಲ್ಲಿ ಮುಳುಗಿರುವ ಸಮಾಜವನ್ನು, ಅದರಲ್ಲಿನ ಕಟ್ಟುಪಾಡುಗಳನ್ನು ಒಳಗೊಂಡಂತೆ ಚಿತ್ರಣಗೊಂಡಿದೆ. ಕವಿಯು ಇಲ್ಲಿ ಸಮಾಜದಲ್ಲಿ ಮನುಷ್ಯನನ್ನು ಜಾತಿ ಎಂಬುದು ಭ್ರಾಂತಿಯನ್ನುಂಟುಮಾಡಿದೆ. ಉತ್ತಮ ಸಮಾಜದಲ್ಲಿ ಜಾತಿಯ–ಮತದ ಭ್ರಾಂತಿ ನಡು–ನಡುವೆ ಗೋಡೆಯೆಬ್ಬಿಸುತ್ತಿದೆ.

ಮತಭ್ರಾಂತ ಕವಿತೆಯು ಹೇಳುವಂತದ್ದು. ಮನುಷ್ಯರೆದೆಯಲ್ಲಿ ಒಲವಿನ ಹಣತೆ ಉರಿಯುತ್ತಿದೆ. ಕರುಣೆಯಲ್ಲಿ ಮನಸ್ಸು ಬೆರೆತಿವೆ. ಇವುಗಳನ್ನು ಮತಭ್ರಾಂತ ಎಂಬಂತವು ಕದಡುವ ಕಾರ್ಯ ಮಾಡುತ್ತಿವೆ. ಮತವದು ಪಥವಲ್ಲ, ಮಾನವತೆಯ ರಥಕ್ಕೆ ಎಂಬುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬಹುದು.

**ನಡು ನಡುವೆ ಗೋಡೆಯೆಬ್ಬಿಸುವ ಈ ಪರಿದೆ**
**ನರನರರನು ದೂರವಿರಿಸುವ ಗರಿಮೆ**
**ಬಣಬೆಗೆ ಬಲು ಬೆಂಕಿಯಿರಿಸಿದ ಹಾಗೆ !**
**ಭೇದ ಪಿಶಾಚಿಗೆ ಧೂಪ ಹಾಕುತ ಬಂದರೆ**
**ನಾಳೆ ದೀಪ ನುಂಗುವ ಭೂಪನಾಗನೆ!**

**(ಪು.ಸಂ೨೮೨)**

ಎನ್ನುತ್ತಾರೆ ಕವಿ.

ಮತ–ಜಾತಿ ಇವುಗಳು ವ್ಯಕ್ತಿ –ವ್ಯಕ್ತಿಗಳ ನಡುವೆ ಪ್ರೀತಿ, ವಿಶ್ವಾಸ ಹುಟ್ಟುಹಾಕುವ ಬದಲು ಅವರ ನಡು–ನಡುವೆ ಗೋಡೆಗಳನ್ನು ಎಬ್ಬಿಸುತ್ತಿದ್ದಾವೆ. ಬಣಬೆಗೆ ಬೆಂಕಿಯಿರುಸುವ ಪ್ರಯತ್ನವಾಗುತ್ತಿದೆ. ಜಾತಿ ಎಂಬಂತಹ ಈ ಭೇದ ಪಿಶಾಚಿಗೆ ಧೂಪ ಹಾಕುತ ಬಂದರೆ, ಅದನ್ನು ಪ್ರೋತ್ಸಾಹಿಸುತ್ತಾ ಸುಮ್ಮನಿದ್ದರೆ ನಾಳೆ ದೀಪವನ್ನೇ ನುಂಗಿ ಬಿಡುವ ಭೂಪನಾಗನೆ ಎಂದು ಕವಿ ಪ್ರಶ್ನಿಸುತ್ತಾರೆ.

ಈ ಜಾತಿ–ಮತ ಎಂಬುವು ಅಭಿವೃದ್ಧಿಯನ್ನು ಮೊಟಕುಗೊಳಿಸುವಂತಹವು, ಇವುಗಳನ್ನು ಬೆಳೆಯಲು ಬಿಡದೆ ಚಿಕ್ಕದರಲ್ಲೇ ನಾಶಮಾಡಬೇಕು. ಇಲ್ಲವಾದಲ್ಲಿ ಅದರ ಪ್ರಾಬಲ್ಯದ ವಿಸ್ತಾರವಾಗುತ್ತದೆ. ಮತಭ್ರಾಂತಿ ಎನ್ನುವುದು. ಹೀಗೆ ಮುಂದುವರಿಯುತ್ತಾ ಬಂದರೆ ನಾಳೆ ಅದೇ

ದೊಡ್ಡ ಸವಾಲಾಗಿ ಸಮಾಜದಲ್ಲಿ ಕಾಡುತ್ತದೆ. ಅದನ್ನು ಭೂರ್ಪಗಲು ಅವಕಾಶ ಕೊಡದೆ ನಾಳಿನ ಉಜ್ವಲ ಭವಿಷ್ಯಕ್ಕೆ ನಾಂದಿಯಾಡಬೇಕು.

**'ಮನುಕುಲದ ದುರಂತ'** ಕವನವು ಸಮಾಜದಲ್ಲಿ ಇಂದು ಎಂತಹ ಪರಿಸ್ಥಿತಿ ಜಾತಿ–ಮತಗಳ ನೆಲೆಯಲ್ಲಿ ನಿರ್ಮಾಣವಾಗುತ್ತಿದೆ ಎಂಬುದರ ಕುರಿತು ತಿಳಿಸುತ್ತದೆ.

ವ್ಯಕ್ತಿ ವ್ಯಕ್ತಿಗಳ ನಡುವೆ ಗೋಡೆಗಳು ಏಳುತಿವೆ. ಮನಸ್ಸು ಮುರಿದುಬಿದ್ದಿವೆ. ವ್ಯಕ್ತಿಗಳ ನಡುವೆ ಸಂಬಂಧಗಳು ಉತ್ತಮ ರೀತಿಯಿಂದ ಕೂಡಿಲ್ಲ.

**ಜಾತಿ ಮತ ವರ್ಣಗಳೆಬ್ಬಿಸಿರೆ ಸಂಶಯ ಭೂತ**
**ಎಲ್ಲಾ ಕಡೆ ಆತಂಕದ ಕಡಲು;**
**ಒಡೆದ ಕನ್ನಡಿಯಲಿ ನೂರು ಛಿದ್ರ ಬಿಂಬ**
**ಕಂಬನಿಯ ಕುಯಿಲು;**

ಜಾತಿ ಮತ ವರ್ಣಗಳು ಎಂಬಂತಹ ಸಂಶಯದ ಭೂತಗಳು ಎಲ್ಲ ಕಡೆ ಹಬ್ಬಿದೆ. ಅದು ಎಲ್ಲಾ ಕಡೆ ಆತಂಕವನ್ನು ಸೃಷ್ಟಿಸಿವೆ. ಆಂತಕದ ಕಡಲಾಗಿದೆ ಎನ್ನುತ್ತಾರೆ ಕವಿ.

**ಭತ್ತ ಕುಟ್ಟಿದರೆ ಅಕ್ಕಿಯಾದರೂ ಬಂದೀತು.**
**ಹೊಟ್ಟು ಕುಟ್ಟುವ ಕೆಲಸ ವ್ಯರ್ಥ;**
**ಅಂತೆ ಜಾತಿ ಮತ ವರ್ಣಗಳ ಒಡನಾಟ**
**ಹಾಲಾಹಲು, ಕಃಪದಾರ್ಥ;**

ಸಮಾಜದಲ್ಲಿ ವ್ಯರ್ಥವಾದಂತಹ, ಉಪಯೋಗವಿಲ್ಲದಂತಹ ಕೆಲಸಗಳು ಬೇಡ ಎನ್ನುತ್ತಾರೆ. ಉಪಯೋಗವಿರುವ ಕಾರ್ಯಗಳಲ್ಲಿ ತೊಡಗಿದರೆ ಅದರಿಂದ ಒಳಿತು, ಅದನ್ನು ಬಿಟ್ಟು ಬೇಡವಾದುದ ಮಾಡಿದರೆ ಅದು ವ್ಯರ್ಥ ಎನ್ನುತ್ತಾರೆ. ಜಾತಿ, ಮತ, ವರ್ಣಗಳು ಇವುಗಳ ಒಡನಾಟ ಕೆಟ್ಟದ್ದು. ಅವುಗಳಿಂದ ಒಳ್ಳೆಯದೆಂಬುದಿಲ್ಲ ಎಂಬುದನ್ನು ತಿಳಿಯಬಹುದು.

**ಬೆಟ್ಟ ಗುಡ್ಡಗಳ ಬಿಟ್ಟು ಹಾರುವಂತೆ ಹಕ್ಕಿ**
**ಹಾರುತಿರಲಿ ವಿಶ್ವ ಪ್ರಜ್ಞಾ ಪಕ್ಷಿ**

**(ಪು.ಸಂ.೧೮೧)**

ಎನ್ನುತ್ತಾರೆ ಕವಿ.

ಮನುಕುಲದ ದುರಂತ ಜಾತಿ ಮತಗಳಿಂದ ನಡೆಯುತ್ತದೆ. ಅದನ್ನು ತಡೆಗಟ್ಟಬೇಕು, ಇವುಗಳು ಸುಸ್ಥಿರ ಸಮಾಜವನ್ನು ನಿರ್ಮಾಣ ಮಾಡಲು ಇರುವ ತಡೆಗೋಡೆಗಳು ಆಗಿವೆ.

ಹಾಗಾಗಿ ಇವುಗಳನ್ನು ಬಿಟ್ಟು ವ್ಯಕ್ತಿಗಳಲ್ಲಿ ಸಮರಸ, ಸೌಹಾರ್ದತೆ, ಉತ್ತಮ ಸಂಬಂಧ ಮುಖ್ಯ. ಇದರಿಂದ ಸಮಾಜದ ಒಳಿತು ಸಾಧ್ಯ.

**'ಕರಿಯ'** ಕವನವು, ಸಮಾಜದಲ್ಲಿನ ಕೆಟ್ಟ ಮನಸ್ಥಿತಿಗಳ ಕುರಿತು ತಿಳಿಸುತ್ತದೆ. ಹಾಗೂ ಕರಿಯ ಎಂಬ ವ್ಯಕ್ತಿಯ ಮೂಲಕ ಸಮಾಜದಲ್ಲಿರುವ ಕೆಲವು ಮನೋಧೋರಣೆಗಳನ್ನು ಕವಿಯು ಇಲ್ಲಿ ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಸಮಾಜದಲ್ಲಿ ಕರಿಯನಂತಹ ಮನಸ್ಥಿತಿಗಳು ಇಂದು ಸಮಾಜದಲ್ಲಿವೆ. ಅಂದರೆ ಪರೋಪಕಾರದ ಮನೋಭಾವವುಳ್ಳಂತವನು. ಅದೇ ರೀತಿ ಕರಿಯನಂತವರನ್ನು ಅಮಾನುಷವಾಗಿ ಕಾಣುವ ಮನಸ್ಥಿತಿಗಳು ಇಂದು ಸಮಾಜದಲ್ಲಿವೆ.

ಕರಿಯ ಎಂಬ ವ್ಯಕ್ತಿ ಜಗಲಿ ಮೇಲೆ ಕುಳಿತು ಎಲೆ ಅಡಿಕೆ ಹಾಕುತ್ತಾ ಕುಳಿತಿರುತ್ತಿದ್ದ. ಆತ ಕುಳಿತಲ್ಲೇ ನವೆದು ಹೋದ ಅಂದರೆ ಆತನಿಗೆ ಆರೋಗ್ಯ ಸಮಸ್ಯೆ ಎಂಬುದನ್ನು ಕಾಣುತ್ತೇವೆ. ಅವನು ನೋಡಲು ಹೇಗಿದ್ದನೆಂದರೆ ಹೆಸರಿಗೆ ತಕ್ಕಂತೆ ಕಪ್ಪು, ಹಾಗಾಗಿ ಕರಿಯ ಎಂದಿರುವಂತದ್ದು, ಬಿಳುಪೇ ಇಲ್ಲ, ಬಿಳುಪು ಎಂಬುದೇನಾದರೂ ಇದ್ದರೆ ಆತನ ಹಲ್ಲುಗಳಷ್ಟೇ. ಆದರೆ ಅಪ್ಪಟ ಚಿನ್ನ, ಕಸ್ತೂರಿ ಎನ್ನುತ್ತಾರೆ. ಅಂತಹ ಉತ್ತಮ ವ್ಯಕ್ತಿತ್ವವುಳ್ಳವನಾಗಿದ್ದನು.

**"ರೋಗಿಯಾದ ಇವನು ಎಷ್ಟೋ ಸಾರಿ**

**ನೊಂದವರಿಗೆ ರೋಗಾಪಹಾರಿ"**

ಕರಿಯನೇ ರೋಗಿ, ಆದರೂ ಆತ ಬೇರೆಯವರಿಗೆ ತನ್ನಿಂದ ಆದ ಸಹಾಯವನ್ನು ಮಾಡುತ್ತಿದ್ದನು. ಬೇರೆಯವರ ರೋಗವನ್ನು ಗುಣ ಪಡಿಸುತ್ತಿದ್ದ. ಕರಿಯ ನೊಂದವರಿಗೆ ರೋಗಾಪಹಾರಿ. ಈತ ಉಳುಕು ತೆಗೆಯುವವನಾಗಿದ್ದನು.

**ಗಾಡಿಯಲಿ ಮೋಟಾರಿನಲಿ ದೂರವೆಷ್ಟರಲಿ ಬಂದವರ**
**ಪ್ರವರ ಹೇಳುವಂತಿದ್ದಂತೆಯೇ;**
**ಉಳುಕು ತೆಗೆಯುವ ಮಂತ್ರಗಾರ ಕರಿಯ**
**ಇವರ ಹಣೆಯ ಬರಹ !**

ಕರಿಯನ ಬಳಿ ಬರುತ್ತಿದ್ದವರು ತಮ್ಮ ರೋಗವನ್ನು ಗುಣಪಡಿಸಿಕೊಳ್ಳಲು ಹೇಗೆಂದರೆ ಗಾಡಿಯಲ್ಲಿ, ಮೋಟಾರಿನಲ್ಲಿ ಎಷ್ಟು ದೂರಿದಿಂದಲಾದರೂ ಬರುತ್ತಿದ್ದರು. ಬಂದವರು ತಮ್ಮ ನೊವನ್ನು ಹೇಳುತ್ತಿದ್ದಂತೆಯೇ ಅವರ ಉಳುಕು ತೆಗೆಯುತ್ತಿದ್ದ ಮಂತ್ರಗಾರನಂತೆ ಕರಿಯ ಅದು

ಒಂದು ಕಲೆಯಂತೆ ಉಳಿಕು ತೆಗೆಯುತ್ತಿದ್ದ. ಬಾಯಲ್ಲೇನೋ ಹೇಳುತ್ತಾ ಮಂತ್ರ ಹಾಕುತ್ತಾ ಮೋಡಿ ಮಾಡುತ್ತಾ ನೋವನ್ನು ಗುಣಪಡಿಸುತ್ತಿದ್ದನು.

**'ಹೊರಿಸಿಕೊಂಡು ಬಂದವರು ನಡೆಸಿಕೊಂಡು ಹೋದರು.**
**ಸುದ್ದಿ ಹರಡಿದಂತೆ ಕೂಡಿತು ಸಂತೆ;**

ಬಂದಂತಹ ಜನರುಗಳು ಕರಿಯನ ಚಿಕಿತ್ಸೆಯಿಂದ ಗುಣವಾಗುತ್ತಿದ್ದರು. ನಡೆದುಕೊಂಡು ಬರಲಾದರೆ ಹೊರಿಸಿಕೊಂಡು ಬಂದಂತಹ ಮಂದಿ ಕರಿಯನಿಂದ ಗುಣಮುಖರಾಗಿ ನಡೆದುಕೊಂಡು ಹೋಗುತ್ತಿದ್ದರು. ಆ ರೀತಿಯಲ್ಲಿ ಕರಿಯನ ಚಿಕಿತ್ಸೆ ಇತ್ತು. ಈ ವಿಷಯ ತಿಳಿಯುತ್ತಿದ್ದಂತೆ ಆತನ ಬಳಿಗೆ ಸಂತೆಯಂತೆ ಬರತೊಡಗುತ್ತಾರೆ. ಗುಣವಾದವರ ಮನಸ್ಸಿನಲ್ಲಿ ಕರಿಯ ಗಣಿಯಂತೆ ಆದ. ಆದರೆ ಆತನಿಗೆ ಅವನದೇ ಬೇರೆ ಚಿಂತೆ ಆವರಿಸಿತು.

**ಕರಿಯನನ್ನು ನಿಕೃಷ್ಟವಾಗಿ ಕಾಣುತ್ತಿದ್ದ ಮತ್ತೊಂದು ನೆಲೆಯನ್ನು ಕಾಣಬಹುದು.**
**'ಮದುವೆಗೂ ಮಂಗಳ ಕಾರ್ಯಕೂ ದೂರ ಪಯಣಕೊ**
**ಹೊರಟಾಗ ಊರಿನ ಮಂದಿ,**
**ಜಗಲಿಯ ಮೇಲೆ ಕರಿಯ ಕುಳಿತಿದ್ದಾನೋ ಇಲ್ಲವೊ**
**ಎಂಬುದ ನೋಡಿಸುವುದೊಂದು ದಂಥೆ'**

ಸಮಾಜದಲ್ಲಿ ವಿಭಿನ್ನ ಮನಸ್ಥಿತಿಗಳಿವೆ. ಕರಿಯ ಎಂಬ ವ್ಯಕ್ತಿತ್ವ ಇಲ್ಲಿ ನೈಜ ಚಿತ್ರಣವನ್ನು ನೀಡುತ್ತದೆ. ಪರೋಪಕಾರಿಯಾದ ವ್ಯಕ್ತಿ ಕರಿಯ ತನ್ನಲ್ಲಿಯೇ ನೋವಿದ್ದರೂ ಮತ್ತೊಬ್ಬರ ನೋವನ್ನು ಗುಣಪಡಿಸುವಂತ ವ್ಯಕ್ತಿ. ಆದರೆ ಸಮಾಜ ಹೇಗೆ ಆತನನ್ನು ಆಕಾರ, ಬಣ್ಣ, ನೋಡಿ ನಿಕೃಷ್ಟ ಎಂದು ಭಾವಿಸುವುದು. ಎಷ್ಟರ ಮಟ್ಟಿಗೆ ಸರಿ ಎಂಬ ಪ್ರಶ್ನೆ ಇಲ್ಲಿ ಎದ್ದು ಕಾಣುತ್ತದೆ. ಕರಿಯ ಎಂಬ ಅಪಶಕುನ. ಹೊರಗಡೆ ಕೆಲಸಕಾರ್ಯಗಳಿಗೆ ಹೊರಟಾಗ ಆತನನ್ನು ನೋಡಬಾರದು ಎಂಬ ನಿಲುವನ್ನು ದೃಢವಾಗಿ ನಂಬಿರುವಂತಹ ಮೌಢ್ಯ ಜನತೆ ಆತನಿಂದ ಸಹಾಯವನ್ನು ಬಯಸುತ್ತಾರೆ. ಆದರೆ ಆತನನ್ನು ಅಪಶಕುನ ಎನ್ನುತ್ತಾರೆ. ಇಂತಹ ಜನತೆ ಸಮಾಜದಲ್ಲಿ ಇರುವ ತನಕ ಉತ್ತಮ ವ್ಯಕ್ತಿತ್ವಗಳಿಗೆ ಬೆಲೆ ಎಂಬುದಿರುವುದಿಲ್ಲ. ಹತ್ತಿಕ್ಕುವ ಪ್ರಯತ್ನ ನಡೆಯುತ್ತಿರುತ್ತದೆ. ಇಂತಹ ಮೌಢ್ಯ ಮನಸ್ಥಿತಿಗಳನ್ನು ಹತ್ತಿಕ್ಕಬೇಕು. ಆಗ ಸುಸ್ಥಿರ ಸಮಾಜವು ನಿರ್ಮಾಣವಾಗುತ್ತದೆ.

**ಸಮಾಜ ವಿರೋಧಿಯಲ್ಲದ ಜೀವವೊಂದನು**
**ಸಮಾಜ ವಿರೋಧಿಸುವುದ ಕಂಡು**
**ನಾನಾಗ ದಿಗ್ಭ್ರಾಂತನಾಗಿದ್ದೆ.**
**ಈಗಲೂ ಅಷ್ಟೇ.**

**(ಪು.ಸಂ.೧೩೪)**

ಮಂಗಳ ಕಾರ್ಯಗಳಿಗೆ ದೂರ ಪ್ರಯಾಣಕ್ಕೆ ಹೊರಟಾಗ ಕರಿಯನ ಮುಖ ಅಪಶಕುನ ಎಂದು ಭಾವಿಸುತ್ತಿದ್ದರು. ಆತನನ್ನು ನೋಡಿದರೆ ಹೋಗುವ ಕೆಲಸ ಆಗದೆಂಬ ಪ್ರತೀತಿ ಅವರಲ್ಲಿ ಬೇರೂರಿಬಿಟ್ಟಿತ್ತು.

ಸಮಾಜ ವಿರೋಧಿಯಲ್ಲದ ಜೀವ ಇಲ್ಲಿ ಕರಿಯ ಎಂಬ ವ್ಯಕ್ತಿತ್ವ ಆದರೆ ಇತನನ್ನು ಸಮಾಜ ಮೌಢ್ಯತೆ ನೆಲೆಯಲ್ಲಿ ಅರ್ಥಹೀನವಾಗಿ ವಿರೋಧಿಸುವುದನ್ನು ಕಂಡು ದಿಗ್ಭ್ರಾಂತನಾಗಿದ್ದೆ. ಈಗಲೂ ಅಷ್ಟೇ ಎನ್ನುತಾರೆ ಕವಿ ಇಂತಹ ವ್ಯಕ್ತಿತ್ವನ್ನು ಕಂಡಿದ್ದಾರೆ. ಅದನ್ನು ಇಲ್ಲಿ ತೆರೆದಿಡುವ ಪ್ರಯತ್ನ ಮಾಡಿರುವುದು ಕಂಡು ಬರುತ್ತದೆ.

ಸಮಾಜ ವಿರೋಧಿಯಲ್ಲದ ಜೀವವೊಂದನ್ನು ಸಮಾಜ ವಿರೋಧಿಸುವಂದ್ದನ್ನು ಇಲ್ಲಿ ಕಾಣಬಹುದು.

**'ಮಾನವತೆ'** ಕವಿತೆಯು ಅಸ್ಪೃಶ್ಯರನ್ನು ಕುರಿತು ತಿಳಿಸುತ್ತದೆ. ಸಮಾಜವು ಅಸ್ಪೃಶ್ಯರು ಎಂಬ ವರ್ಗವನ್ನು ಹೇಗೆ ಕಾಣುತ್ತದೆ. ಅದನ್ನು ಕಿತ್ತೊಗೆಯಬೇಕು. ಆಗಲೇ ಮಾನವತೆ ಎಂಬುವಂತದ್ದು ಮೊಳಗಲು ಸಾಧ್ಯ ಎಂಬ ಆಶಯವನ್ನು ಕವಿ ವ್ಯಕ್ತಪಡಿಸುತ್ತಾರೆ.

ಅಸ್ಪೃಶ್ಯರು ಅಂದರೆ ಇವರು ಸ್ಪರ್ಶಕ್ಕೂ ಯೋಗ್ಯರಲ್ಲದಂತವರು ಎಂಬ ಅರ್ಥವನ್ನು ಹೊಂದಿದೆ. ಅಂದರೆ ಜಾತಿಯ ಹೀನಾಯದ ಪರಿಸ್ಥಿತಿಯಲ್ಲಿ ಸಮಾಜ ಕೂಡಿರುವುದನ್ನು ಕಾಣಬಹುದು. ಜಾತಿ ನೆಲೆಯಲ್ಲಿ ಅಮಾನುಷ ಕೃತ್ಯಗಳು ನಡೆಯುತ್ತಿವೆ. ದಲಿತರು ಎಂಬ ಕರೆಯಲ್ಪಡುವಂತವರನ್ನು ಕುರಿತು ಹೇಳುತ್ತಾರೆ. ಇವರನ್ನು ಕಡೆಯವರು ಎಂದು ಕಡೆಗಣಿಸುವುದ ಬಿಡು ಎನ್ನುತ್ತಾರೆ ಕವಿ. ಜಾತಿ ವ್ಯವಸ್ಥೆಯಲ್ಲಿ ಕಡೆಯಲ್ಲಿ ಬರುವ ವರ್ಗ ಇದಾಗಿದೆ. ಅವರನ್ನು ಕಡೆಗಣಿಸದಿರು ಅವರು ಎಲ್ಲರಂತೆ ಮನುಷ್ಯರಲ್ಲವೆ ಎನ್ನುತ್ತಾರೆ.

**ಕಡೆಯವರೆಂಬ ಕಾರಣದಿಂದ ಕಡೆಗಣಿಸದಿರು ಇವರ**
**ಅವರಿವರ ಹಾಗೆ ನರರಲ್ಲವೆ ಇವರು ಕೂಡ**
**ಮುಟ್ಟಿದರೆ ಮೈಲಿಗೆಯೆಂದು ಹೊರಗಿಡುವ ಯತ್ನದಲಿ**
**ಚರಿತ್ರೆಯುದ್ಧಕ್ಕೂ ನಡೆದದ್ದು ಇವರ ವ್ಯಕ್ತಿತ್ವ ದಹನ.**
**ಇವರ ನೋವಿನಲ್ಲಾಯಿತು ಉಳಿದವರ ಗೆಲುವು**
**ಈಗಿವರ ಗೆಲುವು ಅಲ್ಲವೊ ಅನ್ಯರ ನೋವು.**

ಮುಟ್ಟಿದರೆ ಮೈಲಿಗೆಯಾಗುವುದು ಎಂದು ಹೊರಗಿಡುವ ಪ್ರಯತ್ನ ಮಾಡಿ ದಲಿತರನ್ನು ಚರಿತ್ರೆಯುದ್ಧಕ್ಕೂ ವ್ಯಕ್ತಿತ್ವ ದಹನ ಮಾಡಿದರು. ಇವರ ನೋವಿನಲ್ಲಿ ತಮ್ಮ ಗೆಲುವನ್ನು ಕಂಡುಕೊಂಡರು. ಆದರೆ ಅದು ಗೆಲುವಲ್ಲ, ಅನ್ಯರ ನೋವು ಅದು ಶಾಶ್ವತವಲ್ಲ.

ಕುಡಿಯುವ ನೀರಿಗೆ, ತಿನ್ನುವ ಅನ್ನಕ್ಕೆ, ಭೇದವಿರುವುದೇ ತಟ್ಟೆ-ಲೋಟಗಳಲ್ಲಿ ಅಳೆಯುವ ಮಾರ್ಗ ಅನುಸರಿಸುತ್ತದೆ. ಭೇಧ ಭಾವ ಮಾಡುತ್ತಾರೆ. ಆದರೆ ಭೂಮಿ, ಭಾನು ಭೇದ ಭಾವ ಮಾಡಿವೆಯೇ? ಇಲ್ಲ, ಎಲ್ಲವೂ ನೈಸರ್ಗಿಕ ನಿರ್ಮಿತ.

**"ನೋವಿನಹಾಡು"** ಜಾತಿಯ ನೆಲೆಯಲ್ಲಿ ಶೋಷಿತರಾದಂತಹ ಜನತೆ ಸಮಯದಲ್ಲಿ ತುಂಬಾ ಮಂದಿ ಇದ್ದಾರೆ. ಅವರು ಬೇರೊಬ್ಬರ ಬೆಳವಣಿಗೆ ಕಾರಣರಾದರು. ತಾವು ಮಾತ್ರ ಸಮಾಜದ ಮುಖ್ಯವಾಹಿನಿಯಲ್ಲಿ ತೋರಗೊಳ್ಳದೆ ಒಳಗೊಳಗೆ ಕರಗಿ ಹೋದವರು ಇವರು.

**ತೊಲೆ ಕಂಬಗಳಾಗುತ ಭಾವಣೆಗೆ**
**ತಳಹದಿಯಾದವರು ಮನೆಗೆ,**
**ನೆಲೆಯಾಗಲಿ ಇತರರಿಗೆ ನೆರವಾದರೂ**
**ತಾವು ನೆಲೆಯಿರದೆ ಅಲೆದವರು.**

ಬೇರೊಬ್ಬರ ಭಾವಣಿಗೆ ತಳಹದಿಯಾದವರ, ಇವರು ತಮಗೆ ನೆಲೆಮಾಡಿಕೊಳ್ಳದೆ ಅಲೆದವರು, ಇತರರಿಗೆ ನೆರವಾಗುತ್ತಾರೆ. ಅಂದರೆ ತಮ್ಮ ನೋವು ಕಷ್ಟ ಏನಿರಲಿ ಅದರಲ್ಲಿ ಬೇರೆಯವರಿಗೆ ತಮ್ಮಿಂದ ಸಹಾಯ ಮಾಡುತ್ತಾರೆ. ಜಾತಿಯ ಅಧೀನದಲ್ಲಿ ಇವರು ಕೆಳಸ್ತರದಲ್ಲಿದ್ದು ನೋವಿನಲ್ಲಿ ಜೀವನ ಸಾಗಿಸುತ್ತಿರುವರು. ಮಗ್ಗ ಇವರದಾದರೂ ಬಟ್ಟೆ ಇವರದಾಗದೆ ಸಣ್ಣಗೆ ನಡುಗಿದರು. ಎಂದು ಹೇಳುವ ಮೂಲಕ ಕವಿ ಜಾತಿಯ ಅಮಾನುಷ ನೆಲೆಯನ್ನು ತಿಳಿಸುತ್ತಾರೆ.

ಬಣ್ಣ ಕಣ್ಣುಗಳಲ್ಲಿ ಒಂದೇ ರೀತಿ ಇದ್ದರೂ ಭೇದ ಎಂಬ ರಾಕ್ಷಸನಿಗೆ ಬಲಿಯಾದವರು ಇವರು ಜಾತಿಯ ನೋವಿನಲ್ಲಿ ಬೆಂದವರು. ಭೇದ -ಭಾವ ಎಂಬತದ್ದು ರಾಕ್ಷಸನ ರೀತಿ ಇವರಿಗೆ ಕಾಣುತ್ತದೆ. ಅದು ತೊಲಗಬೇಕು, ಅದರ ಸಂಹಾರವಾಗಬೇಕು ಎಂಬುದನ್ನು ತಿಳಿಯ ಪಡಿಸುತ್ತದೆ.

**ದುಡಿದೂ ಫಲವಿರದೆ ನಡೆದವರು**
**ಮೂಲೆಗುಂಪಾದವರು**
**ನಡುನಡುವೆ ಗೋಡೆಗಳೇಳುತ್ತಾ**

ದೂರವೇ ಉಳಿದವರು.

(ಪು.ಸಂ.೧೩೦)

ದುಡಿದೂ ದುಡಿದೂ ಯಾವುದೇ ಫಲಾಪೇಕ್ಷೆ ಬಯಸದೆ, ಕೊನೆಗೂ ಇವರು ಮೂಲೆಗುಂಪಾದವರು. ಇಂತವರು ಸಮಾಜದಲ್ಲಿ ಎಲ್ಲರ ನಡುವೆ ಬೆರೆಯದೆ ದೂರವೇ ಉಳಿದವರು. ಇವರನ್ನು ಸಮಾಜದಲ್ಲಿ ಉತ್ತಮ ರೀತಿಯಲ್ಲಿ ಕಾಣಬೇಕು. ಅವರು ಮನುಷ್ಯರು, ಅವರ ನೋವಿಗೂ ಸ್ಪಂದಿಸಬೇಕು. ನೋವಲ್ಲಿಯೆ ಜೀವನ ನಡೆಸುವಂತಾಗಬಾರದು.ಪ್ರೊ. ಶಿವರಾಮು ಕಾಡನಕುಪ್ಪೆ ಅವರು ಈ ಕುರಿತಾಗಿ ಹೇಳಿರುವ "ರಾಗೌ ಅವರ ಕಾವ್ಯದ ಸ್ಥಾಯೀ ಭಾವ ನೋವೇ ಆಗಿರುವುದರಿಂದ ಈ ಕಾವ್ಯದುದ್ದಕ್ಕೂ ಅದರ ಮಿಡಿತವೇ ತುಂಬಿದೆ ಎಂಬುದನ್ನು ಗಮನಿಸಬಹುದು"[೧]

**'ದುರ್ಬಲರ ನೋವು',** ಕವನವು ದುರ್ಬಲರು ಸಮಾಜದಲ್ಲಿ ವ್ಯಥೆಪಡುವ ಬಗೆಯನ್ನು ತಿಳಿಸುತ್ತದೆ. ಅವರ ನೋವಿಗೆ ಕಾರಣವೇನು ಎಂಬುವುದನ್ನು ತಿಳಿಸುತ್ತದೆ.

**ದುರ್ಬಲರ ನೋವು ಸಬಲರ ಅಟ್ಟಹಾಸದಲ್ಲಿ**
**ಹುದುಗಿಹೋಗುತ್ತದೆ ಹೆಸರಿಲ್ಲದಂತೆ;**
**ಚಕ್ರಾರ ಪಂಕ್ತಿಗಳೆಷ್ಟೋ ಉರುಳಿವೆ ಈವರೆಗೆ**
**ಬಗೆಹರಿಯದಂತರವಿದೆಂಬುದೆ ಚಿಂತೆ!**

**(ಪು.ಸಂ.೪೩೮**

ದುರ್ಬಲರ ನೋವು ಸಬಲರ ಅಟ್ಟಹಾಸದಲ್ಲಿ ಮರೆಯಾಗುತ್ತದೆ, ಹೆಸರಿಲ್ಲದಂತೆ ಹುದುಗಿ ಹೋಗುತ್ತಿದೆ, ದುರ್ಬಲರ ನೋವು ತಿಳಿದು ಅದನ್ನು ಕಡಿಮೆ ಮಾಡಬೇಕು, ಇಲ್ಲವಾದಲ್ಲಿ ಆ ನೋವಿನಲ್ಲೇ ಅವರ ಅಂತ್ಯ ನಡೆಯುತ್ತದೆ. ಜೀವನವೆಲ್ಲಾ ನೋವಲ್ಲೇ ಕಳೆಯ ಬೇಕಾಗುತ್ತದೆ. ಅಂತಹ ನೋವಿನಲ್ಲಿ ಎಷ್ಟೊ ಮಂದಿ ಜೀವನ ತೊಯ್ದಿದ್ದಾರೆ. ಬಗೆಹರಿಯಲಾರದಷ್ಟು ಅಂತರವಿದೆ ದುರ್ಬಲರ ಸಬಲರ ನಡುವೆ ಎಂಬುದನ್ನು ಕವಿ ಇಲ್ಲಿ ವ್ಯಕ್ತಪಡಿಸುತ್ತಾರೆ.

**ಅಡಿಟಿಪ್ಪಣಿ:**

**೧) ಡಾ. ರಾಗೌ ಸಮಗ್ರಕಾವ್ಯ , ಮುನ್ನುಡಿ–ಪ್ರೊ, ಶಿವರಾಮು, ಕಾಡನಕುಪ್ಪೆ– ಪುಟ ಸಂಖ್ಯೆ– ೧೩, ವಿಜಯಲಕ್ಷ್ಮೀ ಪ್ರಕಾಶನ–ಮೈಸೂರು.**

ದುರ್ಬಲರು ಸಬಲರಾಗಬೇಕು, ಸಬಲರ ಅಟ್ಟಹಾಸದ ಮುಂದೆ ಸರಿಸಮಾನರ । ನಿಲ್ಲಬೇಕು. ದುರ್ಬಲರ ನೋವನ್ನು ಬಗೆಹರಿಸಲು ಹಲವಾರು ಪ್ರಯತ್ನಗಳು ನಡೆದಿದೆ. ಆದರೆ ಅವು ಬಗೆಹರಿದಿಲ್ಲ ಎಂಬುದೇ ಚಿಂತೆಯಾಗಿದೆ.

ಸಮಾನತೆಯ ತತ್ವ ಆಧರಿಸಿ ಸಮಾಜ ನಿರ್ಮಾಣವಾಗಬೇಕು. ದುರ್ಬಲರು–ಸಬಲರು ಎಂಬ ಭೇದ – ಭಾವ ತೊಲಗಬೇಕು. ಅದು ಉತ್ತಮ ಸಮಾಜಕ್ಕೆ ನಾಂದಿಯಾಗುತ್ತದೆ.

**"ಜಾತಿ"** ಕವನವು ಇಂದಿನ ಜಾತಿ ವ್ಯವಸ್ಥೆ ಕುರಿತಾದುದಾಗಿದೆ.

**ನಾಯಿಯೊಂದು ಇನ್ನೊಂದು ನಾಯಿಯ ಕಂಡರೆ**
**ಬೊಗಳೇ ಪ್ರಾಣಿಗಳ ಕಂಡರೂ ಸುಮ್ಮನಿರದ**
**ಬಾಯಿ ತೆರೆದೇ ತೆರೆಯುತ್ತದೆ,**
**ಇಂಡಿಯಾದ ಜಾತಿ ವ್ಯವಸ್ಥೆ ಕೂಡ**
**ಇದಕ್ಕಿಂತ ಮೇಲಲ್ಲ; ಹೋಲುತ್ತದೆ!**

ಜಾತಿ ವ್ಯವಸ್ಥೆ ಹೀಗೆ ತನ್ನ ಮೈಚಾಚಿಕೊಂಡಿದೆ ಸಮಾಜದಲ್ಲಿ ಎಂಬುದನ್ನು ಈ ಕವಿತೆ ಸ್ಪಷ್ಟಪಡಿಸುತ್ತದೆ. ಇಲ್ಲಿ ಒಬ್ಬರನೊಬ್ಬರು ಹತ್ತಿಕ್ಕುವ ಧೋರಣೆ ಹೆಚ್ಚಾಗುತ್ತಿದೆ. ಬೇರೊಬ್ಬರ ಏಳಿಗೆಯನ್ನು ಸಹಿಸದಂತವರು ಜಾತಿ ನೆಲೆಯಲ್ಲಿ ತುಳಿಯುತ್ತಲೇ ಇರಲು ಪ್ರಯತ್ನಿಸುತ್ತಾರೆ. ಇದೇ ವ್ಯವಸ್ಥೆ ಇಂಡಿಯಾದ ಜಾತಿವ್ಯವಸ್ಥೆ ಆಗಿರುವುದು ಇದಕ್ಕಿಂತ ಮೇಲು ಯಾವುದಿಲ್ಲ ಈ ವ್ಯವಸ್ಥೆಯನ್ನೇ ಹೋಲುತ್ತದೆ.

ಇಂಡಿಯಾದ ಜಾತಿ ವ್ಯವಸ್ಥೆ ಹೇಗೆ ತನ್ನ ವ್ಯಾಪ್ತಿಯನ್ನು ಆವಾರಿಸಿಕೊಂಡಿದೆ ಎಂಬುದನ್ನು ತಿಳಿಯಬಹುದು.

ಜಾತಿ ಕವನವು ಜಾತಿ ಬೇರೂರಿ ನೆಲೆ ನಿಂತಿರುವ ಸಮಾಜದ ಭವಿಷ್ಯ ಕುರಿತು ತಿಳಿಸುತ್ತದೆ.

**ಕಲ್ಲು ಚಪ್ಪಡಿಯ ಎಷ್ಟೇ ಹೇರಿದರೂ**
**ಒಳಗೊಳಗೆ ಕಂಗೆಡದ ಕೆಂಡಗಣ್ಣು,**
**ಪುಡಿಯುವ ಒರತೆ**
**ಹಸಿರು ಕಳೆದುಕೊಂಡರೂ ಬೇರು ಉಳಿದಿರುವ**
**ಜಾತಿ ಎಂಬ ಈ ಗರಿಕೆ**
**ಬಣ್ಣ ಬದಲಾದರೂ ದ್ರವ್ಯ ಬದಲಾಗಲಿಲ್ಲ**
**ಎಂಬುದೆ ಈಗಿನ ಚಿಂತೆ.**
**ಭವಿಷ್ಯ ಬರೆಯುವ ಚಿಂತಕರಿಗಂತೂ**
**ಸವಾಲಾಗಿರುವ ಮರೀಚಿಕೆ!**

**(ಪು.ಸಂ.೯೪೫)**

ಜಾತಿ ಎಂಬುದನ್ನು ನಾಶಪಡಿಸಲಾಗುವುದಿಲ್ಲ. ಕಲ್ಲು ಚಪ್ಪಡಿಯ ಎಷ್ಟೇ ಹೇರಿದರೂ ಒಳಗೊಳಗೆ ಅದು ಇರುವಿಕೆ ಕಾಣುತ್ತದೆ. ಜಾತಿ ವ್ಯವಸ್ಥೆ ನಿರ್ಮೂಲನೆಗೆ ಏನೆಲ್ಲಾ ಕ್ರಮಗಳನ್ನು ಅನುಸರಿಸಿದರೂ ಅದು ಹೋಗಲಾಡಿಸದ ಪಿಡುಗಾಗಿ ಪರಿಣಮಿಸಿದೆ, ಅದು ಬೇರೂರಿ ನೆಲೆನಿಂತಿದೆ. ತನ್ನ ಮೇಲಿನ ಬಿಗಿ ನಿಲುವುಗಳಿಂದ ಸಡಿಲವಾಗಿದ್ದರೂ ತನ್ನದೇ ಆದ ಅಡಿಪಾಯದ ಮೇಲೆ ನಿಂತಿರುವುದನ್ನು ಗಮನಿಸಬಹುದು. ಕವಿ ಹೇಳುತ್ತಾರೆ ಇಲ್ಲಿ ಹಸಿರು ಕಳೆದುಕೊಂಡರೂ ಬೇರು ಉಳಿಸಿಕೊಂಡಿರುವ ಗರಿಕೆಯ ರೀತಿ ಈ ಜಾತಿ ಎನ್ನುವಂತದ್ದು ಚಿಗುರೊಡೆಯುತ್ತಲೇ ಇರುತ್ತದೆ.ಮೇಲೆ ಕೊಯ್ದಂತೆ ಕೆಳಗೆ ಚಿಗುರುವ ಗರಿಕೆ ರೀತಿ ಇದಾಗಿದೆ. ಭದ್ರ ಬುನಾದಿಯ ಮೇಲೆ ನಿಂತಿದೆ.

ಬಣ್ಣ ಬದಲಾದರೂ ದ್ರವ್ಯ ಬದಲಾಗಲಿಲ್ಲ ಎಂಬಲ್ಲಿ ಜಾತಿಯ ನೆಲೆಯಲ್ಲಿನ ಶೋಷಣೆಗಳು ಬೇರೆ ಬೇರೆ ರೀತಿಯಿಂದ ಕೂಡಿದ್ದರೂ ಶೋಷಣಾ ಪ್ರವೃತ್ತಿ ಮಾತ್ರ ಬದಲಾಗಿಲ್ಲ ನಿಂತಿಲ್ಲ. ಇದನ್ನು ಬದಲಾಗಿಸಲಾಗಿಲ್ಲ ಎಂಬುದೇ ಇಂದಿನ ಚಿಂತೆಯಾಗಿದೆ. ಹೀಗೆ ಕವಿ ಕಿತ್ತೊಗೆಯಲಾರದ ಬೇರಾಗಿ ಪರಿಣಮಿಸಿದೆ. ಅದನ್ನು ಬುಡ ಸಮೇತ ಕಿತ್ತೊಗೆಯಬೇಕು ಎಂಬ ಆಶಯವನ್ನು ಕವಿತೆಯಲ್ಲಿ ಹೇಳುವ ಪ್ರಯತ್ನ ಮಾಡಿದ್ದಾರೆ.

ಉಜ್ವಲ ಭವಿಷ್ಯ, ಉತ್ತಮ ಸಮಾಜ ನಿರ್ಮಾಣ ಮಾಡಬೇಕೆನ್ನುವ ಚಿಂತಕರಿಗೆ ಈ 'ಜಾತಿ' ಒಂದು ಸವಾಲಾಗಿ ನಿಂತಿದೆ, ಮರೀಚಿಕೆಯಾಗಿದೆ ಎನ್ನುತ್ತಾರೆ.

**'ನಾಳೆಗಳು ನಮ್ಮವು'** ಕವಿತೆಯಲ್ಲಿ ಕವಿ ಭವಿಷ್ಯದ ಜೀವನ ಕುರಿತು 'ನಾಳೆಗಳು ನಮ್ಮವು' ಎಂದು ಕರೆ ನೀಡಿದ್ದಾರೆ, ಶತಶತಮಾನಗಳಿಂದ ತುಳಿತಕ್ಕೆ ಒಳಗಾದವರನ್ನು ಕುರಿತು ಹೇಳುತ್ತಾರೆ

**ಶತಮಾನಗಳಿಂದ ಸತ್ತು ಸುಣ್ಣವಾದುದು ಸಾಕು**
**ಇನ್ನಾದರೂ ನಿಂತು ಬೆನ್ನು ಮೇಲಿನ ಸವಾರಿ**
**ನಮ್ಮ ಪಾಲು ನಮಗೆ ದಕ್ಕಲು ಬಿಟ್ಟು ಬಿಡಿ**
**ಬೇಡವೆ ನಮಗೂ ನೆಲ ನೀರು ಗಾಳಿ ಬೆಳಕು**
**ನಿನ್ನೆ ನಿಮ್ಮದಾದಂತೆ ನಾಳೆ ನಮ್ಮದಾಗಲು**
**ತೆರೆದ ದಾರಿಗೆ ಹೊರಬೇಡಿ ವ್ಯರ್ಥ ಮಣ್ಣು**

**(ಪು.ಸಂ.೨೫೫)**

ಜಾತಿ ವ್ಯವಸ್ಥೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಒಬ್ಬರನ್ನೊಬ್ಬರು ತಿಳಿದು ಮೇಲೇರುವುದು ತಿಳಿದಿದೆ. ಇಲ್ಲಿ ಶೂದ್ರರು ತುಳಿತಕ್ಕೆ ಒಳಗಾದವರು. ಅವರ ನೋವು ಕವಿತೆಯಲ್ಲಿ

ವ್ಯಕ್ತವಾಗಿದೆ. ಶತಮಾನಗಳಿಂದಲೂ ನಾವು ಸತ್ತು ಸುಣ್ಣವಾದುದು ಸಾಕು ಇನ್ನಾದರೂ ನಮ್ಮ ಬಗ್ಗೆ ಗಮನ ಹರಿಸೋಣ ಎನ್ನುತ್ತಾರೆ. ಅಂದರೆ ನೋವಿನಲ್ಲೇ, ಅವಮಾನದಲ್ಲೇ ಕಳೆದದ್ದಾಯಿತು ಇಲ್ಲಿಯವರೆಗೆ, ಇನ್ನು ಮುಂದೆಯಾದರೂ ಅದನ್ನು ಬಿಟ್ಟು ಬದುಕೋಣ ಎಂಬ ನಿಲುವು ಕವಿತೆಯಲ್ಲಿ ಕವಿಯ ಮೂಲಕ ವ್ಯಕ್ತವಾಗುತ್ತಿದೆ.

ಭವಿಷ್ಯ ನಮ್ಮದು ಹಾಗಾಗಿ ಹೇಳುವಂತದ್ದು ಕವಿ ಇಲ್ಲಿ 'ನಾಳೆಗಳು ನಮ್ಮವು' ಎಂದು ನಮ್ಮ ದಾರಿಗೆ ಅಡ್ಡ ಬರಬೇಡಿ. ನಮ್ಮ ದಾರಿಯಲ್ಲಿ ನಮ್ಮನ್ನು ಹೋಗಲು ಬಿಡಿ. ನಮ್ಮನ್ನು ನಿಮ್ಮ ಸಂಕೋಲೆಗಳಿಂದ ಮುಕ್ತರನ್ನಾಗಿ ಮಾಡಿ ಎಂದು ತಮ್ಮ ನೋವನ್ನು ಇಲ್ಲಿ ನೊಂದು ಜನತೆ ಹೇಳಿಕೊಳ್ಳತ್ತಿರುವುದನ್ನು ಕಾಣಬಹುದು.

**'ನೋವು ಗವಿಯಿಂದೆದ್ದು ಬಂದೆವು, ನಾಳೆಗಳು ನಮ್ಮವು!**

ನೋವೆನ್ನುವಂತದ್ದು ಸಣ್ಣಪುಟ್ಟ ಕೂಪದ್ದಲ್ಲ. ಗವಿಯ ರೀತಿ ಎನ್ನುತ್ತಾರೆ. ಅಂತಹ ನೋವೆಂಬ ಗವಿಯಿಂದ ಹೊರ ಬಂದೆವು. ಇಲ್ಲಿಯವರಿಗೆ ಸಹಿಸಿಕೊಂಡ ನೋವೇ ಹೆಚ್ಚು, ಇನ್ನು ಏನಿದ್ದರೂ ಅದರಿಂದ ಹೊರ ಬರಬೇಕು. ಹಾಗಾಗಿ ನಾಳೆಗಳು ನಮ್ಮವು ಎನ್ನುತ್ತಾರೆ.

ಜಾತಿ ವರ್ಗದ ನೆಲೆಯಲ್ಲಿ ಶೋಷಣೆ ಮಾಡಿರುವುದನ್ನು ಕಾಣಬಹುದು ನೋವಿನಿಂದ ಹೊರಬಂದು ಇದುವರಿಗೆ ಏನು ದೊರಕಿಲ್ಲ ಆಸೌಲಭ್ಯವನ್ನೆಲ್ಲಾ ಪಡೆದುಕೊಳ್ಳಲು ಹಾತೊರೆಯುತ್ತಿರುವ ಬಗೆ ಇಲ್ಲಿ ಗಮನಿಸುವಂತದ್ದು.

**'ಮೂಕ ಹಕ್ಕಿಗೆ ಈಗ ಎಲ್ಲಿಲ್ಲದ ಮಾತು ಬತ್ತಿಹೋದ ಭೂತದ ಕನಸಿಗೆ ಅಭಿವ್ಯಕ್ತಿ ಕೊಡಲು!**

ಮೂಕ ಹಕ್ಕಿಗಳು ಇಲ್ಲಿ ತುಳಿತಕ್ಕೆ ಒಳಗಾದವರು. ಇವರಿಗೆ ಈಗ ಮಾತು ಬಂತು ಹೇಗೆಂದರೆ ಶಿಕ್ಷಣದಿಂದ, ರಾಜಕೀಯ ವ್ಯವಸ್ಥೆಯಿಂದ, ಹೀಗೆ ಅನೇಕ ಅಂಶಗಳ ಮೂಲಕ ಆಧುನಿಕತೆಯತ್ತ ಮುಖ ಮಾಡಿ ಬದಲಾವಣೆಯತ್ತ ಸಾಗುತ್ತಿದ್ದಾರೆ. ಅವರು ಇಲ್ಲಿಯವರೆಗೆ ಮಾತು ಬರದಂತೆ ಮೂಕರಾಗಿದ್ದರು. ಈಗ ಅವರಿಗೆ ಎಲ್ಲಿಲ್ಲದ ಮಾತು.

ಈ ಕವಿತೆಯಲ್ಲಿ ಸಾಮಾಜಿಕವಾಗಿ ತುಳಿತಕ್ಕೆ ಒಳಗಾದವರ ಪರವಾಗಿ ಕವಿಯ ದನಿಯನ್ನು ನಾವು ಇಲ್ಲಿ ಕಾಣಬಹುದು.

ರಾಗೌ ಅವರ ಕಾವ್ಯದ ಸ್ಥಾಯೀಭಾವ ನೋವು ಸಂಕಟಗಳೇ ಆಗಿರುವುದರಿಂದ ಅವರ ಕವಿತೆಗಳಲ್ಲಿ ಹೆಚ್ಚಾಗಿ ಅದರ ಮಿಡಿತವೇ ತುಂಬಿದೆ. ಈ ಮಿಡಿತ ಕವಿಗಿರುವ ಅಪಾರ

ಮಾನವೀಯತೆಯನ್ನು ತೆರೆದಿಡುತ್ತದೆ. ನೋವನ್ನು ಕಲೆಯಾಗಿಸಿ ಹೊಸೆದ ಈ ವಿಶಿಷ್ಟ ಕಾವ್ಯವನ್ನು ಸಿ.ನಾಗಣ್ಣ ಅವರು "ವಿಷಾದದ ಒಡಲಲ್ಲಿ ಮಾದುರ್ಯದ ಮಡು" ಎಂದು ಕರೆದಿರುವುದು ಸೂಕ್ತವೇ ಆಗಿದೆ.

**'ಮಾನವ ಪ್ರೀತಿ'** ಕವನವು ಮನುಷ್ಯ ಜಾತಿ ಒಂದೇ ಎಂದು ಹೇಳುವುದರ ಜೊತೆಗೆ ಇಂದಿನ ಕೆಟ್ಟ ಜಾತಿ ಪದ್ದತಿಗಳ ಕುರಿತು ಚರ್ಚಿಸುತ್ತದೆ. ಕವಿತೆಯ ಮುಖೇನ ಕವಿ ಜಾತಿಗಳೆಂಬುದಿಲ್ಲ, ಇರುವುದು ಒಂದೇ ಮನುಷ್ಯ ಜಾತಿ ಎಂಬ ಸಂದೇಶವನ್ನು ನೀಡುವ ಪ್ರಯತ್ನ ಮಾಡಿರುವುದನ್ನು ಕಾಣಬಹುದು.

ಮನುಷ್ಯನಲ್ಲಿ ಪ್ರೀತಿ, ವಿಶ್ವಾಸ, ಸೌಹಾರ್ದತೆ ತುಂಬ ಮುಖ್ಯ. ಅದು ಸಾಧ್ಯವಿಲ್ಲ. ಏಕೆಂದರೆ ಜಾತಿಯ ವಿನಾಶವಾಗದೆ ಮನವರಲ್ಲಿ ಪ್ರೀತಿ ಕಾಣಲು ಸಾಧ್ಯವಿಲ್ಲ ಎನ್ನುತ್ತಾರೆ. ಇಂತಹ ಜಾತಿ ಸಂಘರ್ಷಗಳಿಂದಲೇ ಉಪಟಳಗಳು ಹೆಚ್ಚಾಗುತ್ತಿವೆ, ಜಾತಿಯನ್ನು ಬೇರು ಸಮೇತ ಕಿತ್ತೊಗೆಯಬೇಕು.

'ಮನುಷ್ಯ ಜಾತಿ ತಾನೊಂದೆ ಒಲಂ' ಎಂಬ ಮಾತಿನಂತೆ ಮನುಷ್ಯ ಎಂಬುದೊಂದೆ ಜಾತಿ ಇರುವುದು, ಇದರ ಅನ್ವಯ ಸಮಾಜ ನಿರ್ಮಾಣವಾದರೆ ಅಗ ಉತ್ತಮ ರಾಷ್ಟ್ರ ಕಟ್ಟಬಹುದು. ಇಲ್ಲವಾದಲ್ಲಿ ರಾಷ್ಟ್ರದ ಪ್ರಗತಿಗೆ ಜಾತಿಯೇ ಮೂಲ ಕಂಟಕಪ್ರಾಯವಾಗುವುದರಲ್ಲಿ ಸಂಶಯವಿಲ್ಲ.

ಹೀಗೆ ಸಮಾಜಮುಖಿ ಧೋರಣೆಗಳನ್ನು ಒಳಗೊಂಡಿರುವ ರಾಗೌ ಕವಿತೆಗಳಲ್ಲಿ ಜಾತಿ-ಮತಕ್ಕೆ ಸಂಬಂಧಿಸಿದಂತೆ ತಿಳಿಯಬಹುದು. ಜಾತಿಯೆಂಬ ಅಮಾನುಷ ವ್ಯವಸ್ಥೆ ಸಮಾಜದಲ್ಲಿ ಹೇಗೆ ತನ್ನ ಧೋರಣೆಯನ್ನು ತಾಳುತ್ತದೆ ಅದು ಸಮಾಜಕ್ಕೆ ಹೇಗೆ ಒಂದು ದೊಡ್ಡ ಪಿಡುಗಾಗಿ ಕಂಡು ಬರುತ್ತಿದೆ ಎಂಬುದನ್ನು ಅನೇಕ ಕವಿತೆಗಳಲ್ಲಿ ಜಾತಿಗೆ ಸಂಬಂಧಿಸಿದಂತೆ ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

# ಅಧ್ಯಾಯ–೪.೩

## ಮಹಿಳೆ(ಸ್ತ್ರೀ) ಕುರಿತಾದ ಕವಿತೆಗಳು

ಸಮಾಜದಲ್ಲಿ ಸ್ತ್ರೀ–ಪುರುಷ ಇಬ್ಬರೂ ಪ್ರಮುಖರಾದವರು. ಹೊಸ ಸೃಷ್ಟಿಗೆ ಕಾರಣಕರ್ತರು. ಸಾಮಾಜಿಕ, ಕೌಟುಂಬಿಕ ಜೀವನದಲ್ಲಿ ಸಮಾನರು. ಆದರೆ ಸಮಾಜದಲ್ಲಿ ಹೆಚ್ಚಾಗಿ ಲಿಂಗ ತಾರತಮ್ಯತೆ ಕಂಡುಬರುತ್ತಿದೆ. ಸಮಾಜ ಪುರುಷ ಪ್ರಧಾನ ಸಮಾಜವಾಗಿದ್ದು, ಅಲ್ಲಿ ಪುರುಷನ ತೀರ್ಮಾನವೇ ಅಂತಿಮ ಪುರುಷನ ದಬ್ಬಾಳಿಕೆ ಹೇಚ್ಚಾಗಿದ್ದು ಸ್ತ್ರೀಯನ್ನು ಕಡೆಗಣಿಸುವಂತದ್ದನ್ನು ಕಾಣಬಹುದು. ಹೆಣ್ಣು ತಾಯಿಯಾಗಿ, ತಂಗಿಯಾಗಿ, ಮಗಳಾಗಿ, ಅಕ್ಕನಾಗಿ ಕಾಣಿಸಿಕೊಳ್ಳುವ ಬಗೆ, ಹೆಣ್ಣಿಗೆ ಗೌರವ ನೀಡದಿರುವ ಸಮಾಜ, ಸಾಂಪ್ರಾದಾಯಿಕ ಕಟ್ಟಳೆಗಳಲ್ಲಿ ಹೆಣ್ಣನ್ನು ಬಿಗಿದಿಡುವ ಪ್ರಯತ್ನ, ಪುರುಷ ಪ್ರಧಾನತೆ, ದಬ್ಬಾಳಿಕೆಗೆ, ಶೋಷಣೆಗೆ, ಒಳಗಾದಂತಹ ಸ್ತ್ರೀ ಮಹಿಳಾ ಅಸಮಾನತೆ ಈ ಅಂಶಗಳು ಪ್ರಸ್ತುತ ಭಾಗದ ವಿಷಯ ವಸ್ತುಗಳಾಗಿವೆ. ಹಾಗೂ ಕವಿ ಸ್ತ್ರೀಯನ್ನು ಕೇವಲ ಶೋಷಣಾ ದೃಷ್ಟಿಯಲ್ಲಿ ಅಷ್ಟೇ ನೋಡದೆ ಆಕೆಯಲ್ಲೂ ಹೊಸತನದ ಹುಡುಕಾಟದಲ್ಲಿದ್ದಾಳೆ, ಪುರುಷನ ಶೋಷಣಾ ಪ್ರವೃತ್ತಿಯನ್ನು ಹತ್ತಿಕ್ಕುವತ್ತ ಮುಂದಾಗಿದ್ದಾಳೆ ಎನ್ನುತ್ತಾರೆ. ಮಹಾನ್ ಸಾಧನೆಯತ್ತ ಮುಖಮಾಡಿದ ಹೆಣ್ಣುಮಕ್ಕಳು ಇಂದು ಮಹಾಮಹಿಳೆಯರಾಗಿದ್ದಾರೆ. ಹೀಗೆ ಮಹಿಳೆಯರ ಕುರಿತಂತೆ ಕವಿ ಕಾವ್ಯಗಳಲ್ಲಿ ಉತ್ತಮ ನಿಲುವುಗಳನ್ನು ವ್ಯಕ್ತಪಡಿಸುತ್ತಾರೆ. ಈ ಅಂಶಗಳ ಕುರಿತಾಗಿ ಪ್ರಸ್ತುತ ಭಾಗದಲ್ಲಿ ಅನಾವರಣಗೊಳಿಸಲಾಗಿದೆ.

**ಹೆಣ್ಣು** ಕವನವು ಹೆಣ್ಣಿನ ಮನಸ್ಸನ್ನು ಕುರಿತು ಹೇಳುತ್ತದೆ

**ಹೆಣ್ಣಿನ ಮನ**
**ನೂರೆಂಟು ತನನಗಳಲಿ**
**ಹಾದು ಹೋಗುವಾಗ**
**ಹಾಡಿದವು ಕಾರ್ಮೋಡ**
**ಭೋರ್ಗರೆದವು**
**ಅಲ್ಲಲ್ಲೆ**
**ಕುಳಿತ ಬೆಟ್ಟ ಗುಡ್ಡ !**

(ಪು.ಸಂ.೧೬೩)

ಹೆಣ್ಣಿನ ಮನಸ್ಸಿನ ಕುರಿತು ಕವಿ ಹೀಗೆ ಹೇಳುತ್ತಾರೆ ಹೆಣ್ಣಿನ ಮನಸ್ಸು ನೂರೆಂಟು ರೀತಿಯಲ್ಲಿ ಕೊಡಿರುತ್ತವೆ, ಮನಸ್ಸಿನಲ್ಲಿ ಕಾರ್ಮೋಡಗಳಂತೆ ಬೋರ್ಗರೆವ ಪ್ರಪಾತಗಳಂತೆ ಎಲ್ಲಾ

ರೀತಿಯಲ್ಲಿಯೂ ನಡೆಯುತ್ತಿರುತ್ತವೆ. ಬೆಟ್ಟ ಗುಡ್ಡಗಳಂತೆ ಆಲ್ಲಲ್ಲೆ ಕೆಲವು ವಿಷಯಗಳು ಹೆಣ್ಣಿನ ಮನದಲ್ಲಿ ಕುಳಿತಿರುತ್ತವೆ

ಅಂದರೆ ಹೆಣ್ಣಿನ ಮನಸ್ಸು ಇದನ್ನು ಅರ್ಥಮಾಡಿಕೊಳುವುದು ಸುಲಭವಲ್ಲ. ಆ ಮನದಲ್ಲಿ ಏನೆಲ್ಲಾ ನಡೆಯಲ್ಪಡುತ್ತದೆ ಎಂಬುದನ್ನು ತಿಳಿಯಲಾಗುವುದಿಲ್ಲ. ಆಕೆಯ ಮನಸ್ಸಿನಲ್ಲಿರುವುದನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ ಎನ್ನುತ್ತಾರೆ.

**'ಹೆಣ್ಣಿನ ಅಳಲು'** ಕವನವು ಹೆಣ್ಣಿನ ಅಂತರಂಗದ ನೋವನು ತಿಳಿಸುತ್ತದೆ.

**ಹೆಣ್ಣಿನ ಅಂತರಾಳದ ಅಳಲನು**
**ಹೋಗಲಾಡಿಸದೆ ಹೋದರೆ,**
**ಅಂಟಿದ ಅಪಕೀರ್ತಿ**
**ಬಹಳವೆ ಮಾನವಕುಲಕೆ ;**
**ಮಂದಹಸ ಮೂಡುವತನಕ**
**ಹಮ್ಮಿಕೊಳುವುದನಿವಾರ್ಯ**
**ದು:ಖ ವಿರೋಧಿ ಚಳುವಳಿಯ !**

ಹೆಣ್ಣಿನ ಅಂತರಾಳದ ನೋವು ಇದೆಯಲ್ಲ ಅದು ಯಾರ ಮುಂದೆಯೂ ಕಾಣುವುದಿಲ್ಲ. ಅದನ್ನು ಹೋಗಲಾಡಿಸಲು ಪ್ರಯತ್ನಿಸಬೇಕು. ಆಕೆಯ ಅಂತರಾಳದ ಅಳಲನ್ನು ಹೋಗಲಾಡಿಸಬೇಕು.

ಶತಶತಮಾನದಿಂದ ಹೆಣ್ಣನ್ನು ದು:ಖದಿಂದಲೇ ನೋಡಿದ್ದೇವೆ. ಆಕೆಯ ಅಪಕೀರ್ತಿಯನ್ನು ಕಿತ್ತೊಗೆಯ ಬೇಕು ಆಕೆಯ ಅಳಲನ್ನು ಹೋಗಲಾಡಿಸಬೇಕು. ಹೆಣ್ಣಿನ ಅಳಲನ್ನು ದು:ಖವನ್ನು ಹೋಗಲಾಡಿಸದಿದ್ದರೆ ಅದು ಮಾನವ ಕುಲಕ್ಕೆ ಒಳ್ಳೆಯದಲ್ಲ. ಆಕೆಯಲ್ಲಿ ಮಂದಹಾಸ ಮೂಡುವಂತೆ ಮಾಡಬೇಕು.

ಹೆಣ್ಣಿನ ದು:ಖದ ವಿರುದ್ಧ ಚಳುವಳಿ ಮಾಡಬೇಕು ಅದು ಅನಿವಾರ್ಯವಾಗಿದೆ. ಹೆಣ್ಣಿನ ಪರವಾದ ನಿಲುವಿರಬೇಕು ಎಂದು ಹೇಳುವುದರ ಮೂಲಕ ಕವಿ ಹೆಣ್ಣಿನ ಪರವಾದ ತಮ್ಮ ನಿಲುವನ್ನು ಕವಿತೆಯಲ್ಲಿ ತಂದಿದ್ದಾರೆ.

ಹೆಣ್ಣಿಗೆ ಮುಖ್ಯ ಸ್ಥಾನ ಕಲ್ಪಿಸಬೇಕು. ಇಲ್ಲವಾದಲ್ಲಿ ಅವಳಿಗೆ ಅಪಕೀರ್ತಿಯಾಗುತ್ತದೆ.

ಅಳಲನಳಿಸುವುದೆಂದು ಕವನವು ಹೆಣ್ಣಿನ ಅಳಲನ್ನು ದು:ಖವನ್ನು ಎಂದು ತಡೆಯುವುದು ಎಂಬುದನ್ನು ತಿಳಿಸುತ್ತದೆ. ಹೆಣ್ಣಿನ ನೋವಿನ ಕುರಿತಾಗಿ ಕವಿ ಅಳಲನ್ನು ಅಳಿಸುವುದು ಎಂದು ಎನ್ನುತ್ತಾರೆ.

**ಹೆಣ್ಣಿನ ಅಳಲನಳಿಸುದೆಂದು; ದಿನೇ ದಿನೆ**
**ಉಲ್ಬಣಿಸುತ್ತಿದೆ ಬದುಕು ದೊರೆಯೆ.**
**ಮಾನವತೆಯ ಸೆಲೆಯಲ್ಲವೆ ಅವಳು;ಬಳಲಿಸಿದರು**
**ಬರಿದೆ ಪುರುಷ ಸಿಂಃಗಳು; ನಿಲ್ಲಿಸಲದೆಯಾ ತಂದೆ**
**ಬಾಳುವುದಕೆ ಅವಳಿಗೂ ಃಕ್ಕಿದೆ; ಬೀಳಗೊಡದಂತೆ**
**ತರಬೇಕಲ್ಲವೆ ನಿರಂತರ ಹಳಿಯ ಮೇಲೆ**

**(ಪು.ಸಂ.೫೭೮)**

ಹೆಣ್ಣನ್ನು ಬಳಲಿಸಿದ ಪುರುಷ ಸಿಂಹಗಳೂ ಆಕೆಯ ಮೇಲಿನ ದಬ್ಬಾಳಿಕೆಯನ್ನು ನಿಲ್ಲಿಸಬೇಕು. ಆಗುವ ಅನಿಷ್ಟಕ್ಕೆಲ್ಲ ಕೆಡುಕಿಗೆಲ್ಲಾ ಹೆಣ್ಣನ್ನೇ ಗುಮಾಡಿದರೆ ಹೇಗೆ? ಇಬ್ಬರದೂ ಪಾಲು ಇರುತ್ತದೆ ಎನ್ನುತ್ತಾರೆ ಕವಿ, ಬಾಳುವುದಕ್ಕೆ ಹೆಣ್ಣಿಗೆ ಹಕ್ಕಿದೆ ಅದು ಪುರುಷನಿಗಷ್ಟೆ ಅಲ್ಲ. ಆಕೆಯನ್ನು ಸಮಾನವಾಗಿ ಕಾಣಬೇಕು ಎಂಬ ಆಶಯದಲ್ಲಿ ಕವಿ ಹೇಳುತ್ತಾರೆ–'ತರಬೇಕಲ್ಲವೆ ನಿರಂತರ ಹಳಿಯ ಮೇಲೆ'. ಎನ್ನುತ್ತಾರೆ.

'ಹೂಡಿದ ನೊಗಕೆ ಅವಳೂ ಕೊರಳ ಕೊಟ್ಟಿಲ್ಲವೆ?' ಎನ್ನುತ್ತಾರೆ

**ಪುರುಷಪರ ಸ್ತ್ರೀಪರ ಎಂಬುದೆಲ್ಲ ಉಭಯಪರವಾಗಿ**
**ತಳೆದು ನಿಲ್ಲಲಿ ಮನುಕುಲದ ಧೋರಣೆ;**
**ಕಪ್ಪು ಚುಕ್ಕೆಗಳನಳಿಸಿ ಸುವರ್ಣಾಕ್ಷರವ ಬರೆಯಲೆ**
**ನಿಂತು ಎಲ್ಲ ಬಗೆಯ ಶೋಷಣೆ**

**(ಪು.ಸಂ.೫೭೮)**

ಪರ–ವಿರೋಧಗಳು ಎಂಬ ಭಾವನೆ ನಿಲ್ಲಬೇಕು. ಸ್ತ್ರೀಪರ, ಪುರುಷಪರ ಎಂಬಂತಹ ಉಭಯಪರಗಳು ನಿಲ್ಲಬೇಕು, 'ಮನುಕುಲದ ದೋರಣೆ' ಎದ್ದು ನಿಲ್ಲಲಿ ಎನ್ನುತ್ತಾರೆ.

ಹೆಣ್ಣಿನ ಮೇಲಿನ ಎಲ್ಲಾ ರೀತಿಯ ಶೋಷಣೆ ನಿಲ್ಲಲಿ ಎನ್ನುತ್ತಾರೆ. ಒಟ್ಟಾರೆ ಯಾವುದೇ ರೀತಿಯ ಅಸಮಾನತೆ ಇರದೆ ಹೆಣ್ಣು–ಗಂಡು ಎಂಬುದರಲ್ಲಿ ಸಮಾನ ಮನೋಭಾವವಿರಬೇಕು. ಮನುಕುಲದ ಧೋರಣೆ ಮೊಳಗಬೇಕು.ಆಗ ಸುಸ್ಥಿರ ಸಮಾಜ ರೂಪುಗೊಳ್ಳುತ್ತದೆ.

**'ಹೆಣ್ಣು ಗಂಡಿನ ಮಧ್ಯೆ'** ಈ ಕವಿತೆಯು ಹೆಣ್ಣು-ಗಂಡಿನ ಸಂಬಂಧದ ಬಗ್ಗೆ ತಿಳಿಸುತ್ತದೆ.

**ಗಂಡು ಹೆಣ್ಣಿನ ಸಂಬಂಧದ ಮಧ್ಯೆ**
**ಹೊಂದಾಣಿಕೆ ಒಂದು ಸಾಧನ;**
**ತತ್ವ ಅತತ್ವಗಳ ಸಂಘರ್ಷದೊಳಗೆ**
**ಮುಳ್ಳು ಮೊನೆಯ ಸಹಜ ಸ್ಪರ್ಶ,**
**ನಡವಳಿಕೆಗೆ ಅನುಗುಣವಲ್ಲದ**
**ಸ್ವೀಕಾರ ನಿರಾಕರಣಗಳ ವೈಭವ !**

ಗಂಡು ಹೆಣ್ಣಿನ ಸಂಬಂಧ ಒಳ್ಳೆಯ ರೀತಿಯಿಂದ ಕೂಡಿರಬೇಕು. ಅವರಿಬ್ಬರಲ್ಲೂ ಹೊಂದಾಣಿಕೆ ಎಂಬುದು ಒಂದು ಸಾಧನವಾಗಿರಬೇಕು. ಹಾಗಿದ್ದಾಗ ಮಾತ್ರ ಸಂಸಾರ ಎಂಬ ನೌಕೆ ಸುಗಮವಾಗಿ ಪಯಣಿಸಬಹುದು. ಹಾಗೆಯೇ ನಂಬಿಕೆಯೂ ಬಹುಮುಖ್ಯ.

ಗಂಡು-ಹೆಣ್ಣಿನ ನಡುವೆ ವಿಷಯವಾಸನೆಯೊಂದೆ ಮುಖ್ಯವಲ್ಲ. ಅದರಾಚೆಗೂ ಸಂಬಂಧ ಬಹುಮುಖ್ಯವಾದುದು ಎಂದು ತಿಳಿಸುವುದರ ಜೊತೆಗೆ ಕವಿ ದಾಂಪತ್ಯ ಜೀವನ ಉತ್ತಮವಾಗಿರಬೇಕು ಎಂದು ತಿಳಿಸುತ್ತಾರೆ.

**'ಮಹಿಳೆಯ ಮಹಾಗಾಥೆ'** ಕವನವು ಮಹಿಳೆಯರ ನೋವು, ಮಹಿಳೆಯ ಮೇಲೆ ಪುರುಷನ ದಬ್ಬಾಳಿಕೆ ಈ ಅಂಶಗಳನ್ನು ಕುರಿತು ತಿಳಿಸುತ್ತದೆ.

**ಬೇಟೆಗಾರನ ಬೇಟೆಯ ಮೃಗವಲ್ಲ ಮೃಗಾಕ್ಷಿ**
**ಮೊದಲಿದನವರಿಯಬೇಕು ಪುರುಷನ ಮನಸಾಕ್ಷಿ;**
**ತನಗಿಷ್ಟ ಬಂದಂತೆ ಬರೆದನಿತಿಹಾಸವನೀವರೆಗೆ**
**ಮುಂದಿನದೆಲ್ಲ ಮಹಿಳೆಯ ಮಹಾಗಾಥೆಯ !**

**(ಪು.ಸಂ.೪೨೧)**

ಮಹಿಳೆಯನ್ನು ಒಂದು ಬೇಟೆಯ ಮೃಗದ ರೀತಿ ಬಳಕೆ ಮಾಡುತ್ತಿರುವಂತಹ ಪುರುಷರನ್ನು ಕಾಣಬಹುದು.

ಹೆಣ್ಣು ಬೇಟೆಯ ಮೃಗವಲ್ಲ. ಇದನ್ನು ಪುರುಷನ ಮನಸಾಕ್ಷಿ ಏನಿದೆ. ಅದು ಅರಿತುಕೊಳ್ಳಬೇಕು. ಇದುವರೆಗೆ ನಡೆದಿರುವುದು, ಬರೆದಿರುವುದು ಪುರುಷನು ಬರೆದ ಇತಿಹಾಸ. ಆದರೆ ಮುಂದಿನದು ಮಹಿಳೆಯ ಮಹಾಗಾಥೆಗಳೇ ಎನ್ನುತ್ತಾರೆ.

ಇಲ್ಲಿಯತನಕ ಪುರುಷನದು, ಮುಂದೆ ಏನಿದ್ದರೂ ಮಹಿಳೆಯರು ಬರೆದ ಇತಿಹಾಸವೇ ಆಗಿರುತ್ತದೆ.

**'ಮಹಾಮಹಿಳೆಯರು'** ಕವನವು ಮಹಾಮಹಿಳೆಯರನ್ನು ಕುರಿತು ತಿಳಿಸುತ್ತವೆ. ನಮ್ಮಲ್ಲಿ ಮಹಾನ್ ವ್ಯಕ್ತಿಗಳಾಗಿ ಕಂಡುಬರುವ ಮಹಿಳಾ ಮಣಿಯರ ಕುರಿತಾಗಿದೆ. ಅನೇಕ ಮಹಿಳೆಯರು ತಮ್ಮದೇ ಆದ ಮಹತ್ ಕಾರ್ಯಗಳಿಂದ ವಿಶಿಷ್ಟರಾಗಿ ಕಂಡು ಬರುತ್ತಾರೆ. ಅವರದೇ ಆದ ಕೊಡುಗೆ ನೀಡಿ ಗೌರವಕ್ಕೆ ಪಾತ್ರರಾದ ಮಹಿಳೆಯರ ಕುರಿತಾಗಿದೆ ಈ ಕವಿತೆ.

**ಸಿನಿಮಾ ಹೀರೋ ಹೀರೋಯಿನ್ನುಗಳ**
**ರಾಜಕೀಯ ತಿಪ್ಪರಲಾಗದವರ**
**ಪಂಧ್ಯ ಪುರುಷೋತ್ತಮರ**
**ಮೋಸದಾಟ ಹೀನಾಯಗಳ**
**ನಡುವೆಯೇ ಮಿಂಚುತ್ತಾರೆ.**
**ತಮ್ಮ ಅಕೃತಕ ಕೊಡುಗೆಯಿಂದ;**

**(ಪು.ಸಂ.೪೧೦)**

ಸಿನಿಮಾದವರು, ರಾಜಕೀಯದವರು, ಪಂಧ್ಯ ಪುರುಷೋತ್ತಮರು ಇವರುಗಳು ಮೋಸದಾಟವನ್ನೇ ಆಡುತ್ತಾ, ಮೋಸದಲ್ಲಿಯೇ ಬದುಕನ್ನು ಸಾಗಿಸುತ್ತಿರುತ್ತಾರೆ. ಹೀನಾಯಗಳ ನಡುವೆಯೇ ಮಿಂಚುತ್ತಿರುತ್ತಾರೆ.

ಅಕೃತಕ ಕೊಡುಗೆಯಿಂದ ಮಹನೀಯರೆನಿಸಿರುವ ಮಹಾ ಮಹಿಳೆಯರಿದ್ದಾರೆ. ಸಾಲು ಮರದ ತಿಮ್ಮಕ್ಕ, ಪುಟ್ಟೀರಮ್ಮ ಕಿವುಡ ಮೂಗರಿಗಾದಂತವರು, ಹೆರಿಗೆ ವಿದ್ಯೆಯ ಜಿಲ್ಲೆ ಸಿದ್ದಮ್ಮ, ತುಳಸಿಯಂಥ ವನದೇವತೆಯರು ಹೆಣ್ಣು ಸಂತಾನಕ್ಕೆ ಗೌರವ ತಂದಂತಹ ಮಹಾ ಮಹಿಳೆಯರು.

ಹೆಣ್ಣನ್ನು ಕಡೆಗಣಿಸುವ ಸಮಾಜಕ್ಕೆ ಈ ರೀತಿಯ ಮಹಾ ಮಹಿಳೆಯರು ತಕ್ಕ ಉತ್ತರವನ್ನು ನೀಡುತ್ತಿರುವುದು ಗಮನಾರ್ಹವಾದ ವಿಷಯವಾಗಿದೆ.

**'ಇವಳು'** ಕವನವು ಹೆತ್ತ ತಾಯಿಯ ಕುರಿತಾದುದಾಗಿದೆ.

**ಮಕ್ಕಳ ಕರುಳಿನಲಿ ಬೆರಳನಾಡಿಸುತಲಿ**
**ನನ್ನತ್ತ ಕಂಗಳ ನೆಸೆವ ಮಾಟದಾಕೆ;**
**ನೋವಿನಲ್ಲು ಮೊಗದಿ ನಗೆಯ ಹೂಮುಡಿವ**
**ನನ್ನ ಮನೆಗಿವಳೆ ತುಂಬು ಹಣತೆ.**

**(ಪು.ಸಂ.೨೧೯)**

ತಾಯಿ ನೋವನ್ನು ಮರೆಸುವಾಕೆ, ನೋವಿನಲ್ಲಿಯೂ ನಗೆಯ ಮೂಡಿಸುವ ಶಕ್ತಿ ತಾಯಿಯಾಗಿದ್ದಾಳೆ. ಮನೆಗೆ ತುಮಬು ಹಣತೆಯಾಗಿ ಕಾಣಬಹುದು ತಾಯಿಯನ್ನು.

ತುಸು ಸೋಮಾರಿಯಾದ ನನಗೆ ಸದಾ ಅಲರಾಂನಂತೆ ನಿಂತಿರುತ್ತಿದ್ದಳು ತಾಯಿ. ತಾಯಿಯದು ಅನಂತದಾಶೆಯ ಚೆಲುವು, ಅದು ಕಡಿಮೆಯದಲ್ಲ.

ತಾಯಿ ಹೇಗೆಂದರೆ ಬೇರೆಯವರಿಗೆ ನೆರಳಾಗಿ ಇರುವಳು. ನೆರಳು ನೀಡಿದರೂ ಬೇರೆಯವರಿಗೆ ಅದರ ಅರಿವಿಲ್ಲದಂತೆ ನಿತ್ಯ ಉಲ್ಲಾಸಿತೆಯಾಗಿರುವಳು ತಾಯಿ ಎಂದು ಕವಿ ಹೀಗೆ ಹೇಳುತ್ತಾರೆ.

**ನೆಳಲ ನೀಡಿದೂ ಅದರರಿವು ಇರದ ತರುವಂತೆ**
**ಮನವ ತೊಯ್ಯುವುದು ನಿತ್ಯ ಉಲ್ಲಸಿತ;**
**ನೆಲದ ಸತ್ಯದ ಹಾಗೆ ಒಲವನೆರೆಯುತ ನಿಂತ**
**ನನ್ನ ಜೀವನಕ್ಕಿವಳು ಉಚ್ಛ್ವಾಸ ನಿಶ್ವಾಸ.**

**(ಪು.ಸಂ.೨೧೯)**

ತಾಯಿಯೇ ಎಲ್ಲ, ಭೂಮಿ ತಾಯಿಯ ರೀತಿ ಆಕೆ. ನಮ್ಮ ಜೀವನಕ್ಕೆ ಈಕೆಯೇ ಎಲ್ಲಾ ಉಚ್ಛ್ವಾಸ ನಿಶ್ವಾಸವಾಗಿರುತ್ತಾಳೆ. ತಾಯಿಯ ಮಹತ್ವವನ್ನು ಕವಿ ಇಲ್ಲಿ ಕವಿತೆಯ ಮೂಲಕ ತಿಳಿಸುತ್ತಾ ತಾಯಿಯ ಬಗ್ಗೆ ಗೌರವವನ್ನು ವ್ಯಕ್ತ ಪಡಿಸುತ್ತಾರೆ.

ಆದರೆ ಇಲ್ಲಿ ತಾಯಿಯೇ ಉಸಿರು ಎಂದು ಹೇಳುವಂತದ್ದನ್ನು ಕಾಣಬಹುದು.

**'ತಾಯಿಕರುಳು'** ತಾಯಿ-ತಾಯಿ ಕರುಳಿನ ಸಂಬಂಧ ಶ್ರೇಷ್ಠವಾದುದು ಎಂಬುದನ್ನು ಈ ಕವಿತೆ ತಿಳಿಸುತ್ತದೆ. ತಾಯಿಯ ಮರೆಯಲು ಸಾಧ್ಯವಿಲ್ಲ. ಆಕೆ ಮರೆಯದ ಜೀವ, ನಮಗೆ ಜೀವ ಕೊಟ್ಟ ಮಹಾ ತಾಯಿ.

**ನಿನ್ನ ಸ್ಪರ್ಶಕೆ ನಾನು ಅಮರನಾಗದಿದ್ದರೂ**
**ಮರೆಯದಂತೆ ಮಾಡಿದೆ ನಾನು ನಿನ್ನ;**
**ಹತಾಶೆಯ ಹಂತದಲ್ಲೊಂದು ನೆಲೆಯಲಿ**
**ಪುಳಕಗೊಳಿಸಿದೆ ನನ್ನ ಜೀವನವನ್ನು !**

**(ಪು.ಸಂ.೭೮೬)**

ಎಂದು ಹೀಗೆ ಕವಿ ತಾಯಿಯ ಬಗ್ಗೆ ತಿಳಿಸುತ್ತಾರೆ.

'ನಿನ್ನ ಉದ್ಯಾನದಲೆಷ್ಟೊ ಕೋಗಿಲೆಗಳಿದ್ದವು ನಿಜ, ಕಲ್ಪಿಸಿದೆ ಅದರಲ್ಲೊಂದು ಸ್ಥಾನ;

ಎನ್ನುತ್ತಾರೆ ಕವಿ ತಾಯಿ ತನ್ನ ಮಕ್ಕಳನ್ನು ನೋಡಿಕೊಳ್ಳುವುದು, ಅವರಿಗೆ ಉತ್ತಮ ಸ್ಥಾನಮಾನವನ್ನು ಕಲ್ಪಿಸಿಕೊಡುತ್ತಾಳೆ. ತನ್ನ ತಾಯಿಯ ಬಗ್ಗೆ ಮಗ ಹೇಳುವುದು, ತಾಯಿ ತನಗೆ ನೀಡಿದ ಅವಕಾಶಗಳ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುವುದನ್ನು ಕಾಣಬಹುದು.

ತಾಯಿ ಮಕ್ಕಳಿಗೆ ಮಹಾನ್ ಸ್ಫೂರ್ತಿ ಇದ್ದಂತೆ. ಅವಳು ಜೊತೆಗಿದ್ದರೆ ಸಾಕು ಮಕ್ಕಳು ಮುಂದೆ ಬರುತ್ತಾರೆ ಎನ್ನುತ್ತಾರೆ.

**'ಕಪ್ಪು ಇತಿಹಾಸ'** ಕವನವು ಸ್ತ್ರೀ-ಪುರುಷರ ನಡುವಿನ ಸಮಾನತೆ ನೆಲೆಯಲ್ಲಿ ಚಿತ್ರಿತವಾಗಿದೆ.

ಸ್ತ್ರೀ-ಪುರುಷರ ನಡುವಿನ ಸಮಾನತೆ ಮರೀಚಿಕೆಯಂತಾಗಿದೆ ಎಂದು ಹೇಳುತ್ತಾರೆ.

**ಸ್ತ್ರೀಪುರುಷ ಸಮಾನತೆಯೆಂಬುದು ಮರೀಚಿಕೆಯೆ**
**ಹೆದರಿಕೆಯಾಗುತ್ತಿದೆ ವಿದ್ಯಮಾನಗಳನು ನೋಡಿದಿರೆ;**
**ಶಿಶುಹತ್ಯೆಯಿಂದ ಹಿಡಿದು ಸೀಮೆಯೆಣ್ಣೆವರೆಗೆ**
**ದಹಿಸಿಹೋಗುತ್ತಿರುವಳು ಕಣ್ಣೆದುರೆ;**
**ಕೊನೆಯಿಲ್ಲವೆ ತಂದೆ ಈ ಕಪ್ಪು ಇತಿಹಾಸಕೆ**
**ನೋಯುತ್ತಿದೆ ಮನುಕುಲದ ಮನಸಾಕ್ಷಿಯೆ**

**(ಪು.ಸಂ.೪೨೦)**

ಸ್ತ್ರೀ-ಪುರುಷರ ನಡುವಿನ ಅಸಮಾನತೆಯ ಮಟ್ಟ ಹೆದರಿಕೆಯನ್ನು ಉಂಟುಮಾಡುತ್ತಿದೆ. ಅನೇಕ ರೀತಿಯ ಕೆಟ್ಟ ದೌರ್ಜನ್ಯಗಳು ಸ್ತ್ರೀಯ ಮೇಲೆ ನಡೆಯುತ್ತಿರುವುದರ ಕುರಿತು ತಿಳಿಸುತ್ತಾರೆ.

ನಾವು ಇಲ್ಲಿ ಮುಖ್ಯವಾಗಿ ಗಮನಿಸುವುದಾದರೆ 'ಕೊನೆಯಿಲ್ಲವೆ ತಂದೆ ಈ ಕಪ್ಪು ಇತಿಹಾಸಕ್ಕೆ' ಅಂದರೆ ಇಲ್ಲಿ ಪುರುಷರ ದೌರ್ಜನ್ಯ ಅಸಮಾನತೆ ನೆಲೆ ಕಪ್ಪು ಇತಿಹಾಸವಾಗಿ ಮನುಕುಲದ ಮನಸಾಕ್ಷಿಗೆ ವಿರುದ್ಧವಾದಂತಹ ರೀತಿಯಿಂದ ಕೂಡಿದುದಾಗಿದೆ ಎನ್ನಬಹುದು.

**'ಸಾಧನೆ'** ಕವನವು ಸ್ತ್ರೀ-ಪುರುಷ ಸಮಾನ ನೆಲೆಯ ಕುರಿತದಾಗಿದೆ. ಸ್ತ್ರೀ-ಪುರುಷ ಇಬ್ಬರೂ ಸಮಾನರು ಎಂದು ಕವಿ ಹೇಳುವ ಪ್ರಯತ್ನ ಈ ಕವಿತೆಯಲ್ಲಿ ಕಂಡುಬರುತ್ತದೆ. ಕವಿಯ ನಿಲುವು ಯಾರ ಪರ, ವಿರೋಧವೂ ಅಲ್ಲ, ಸಮಾನ ನೆಲೆಯಲ್ಲಿ ಚಿಂತನೆ ನಡೆಸಿರುವುದನ್ನು ಕಾಣಬಹುದು.

**ಪ್ರತಿ ಪುರುಷನ ಸಾಧನೆಯ ಹಿಂದೆ**
**ಹೆಣ್ಣೊಬ್ಬಳು ಇರುತ್ತಾಳೆ.**
**ಇದು ಹಿಂದಿನ ಸೂತ್ರ;**
**ಪ್ರತಿ ಹೆಣ್ಣಿನ ಸಾಧನೆಯ ಹಿಂದೆ**
**ಗಂಡೊಬ್ಬನು ಇರಬೇಕು**
**ಇದು ಇಂದಿನ ಸೂತ್ರ**

**(ಪು.ಸಂ.೪೦೩)**

ಕಾಲ ಬದಲಾದಂತೆ ಎಲ್ಲಾ ಬದಲಾಗುತ್ತವೆ. ಕಾಲದ ಮುಂದೆ ಯಾವುದೂ ಇಲ್ಲ, ಪುರುಷನ ಸಾಧನೆಗೆ ಹಿಂದೆ ಬೆಂಗಾವಲಾಗಿ ಸ್ತ್ರೀ ಇರುತ್ತಿದ್ದಳು. ಇಂದು ಆ ಹೆಣ್ಣಿಗೆ ಬೆಂಗಾವಲಾಗಿ ಅವಳ ಸಾಧನೆಗೆ ಪುರಷುನಾದವನು ಇರಬೇಕು ಎನ್ನುತ್ತಾರೆ. ಈ ಕವಿತೆಯ ಮೂಲಕ ಕವಿ, ಕವಿಯ ಸಮಾನತೆ ಭಾವ ಕವಿತೆಯಲ್ಲಿ ಕಂಡುಬರುತ್ತದೆ.

ಅಂದರೆ ಸ್ತ್ರೀ–ಪುರುಷ ಇಬ್ಬರೂ ಸಮಾನರು, ಯಾರೂ ಕಡಿಮೆ ಇಲ್ಲ, ಪುರುಷನಂತೆ ಸ್ತ್ರೀಯರು ಕೂಡ ಸಮಾಜದ ಮುಖ್ಯವಾಹಿನಿಗೆ ಬರಬೇಕು. ಅವಳ ಸಾಧನೆಗೆ ಪುರುಷ ಮುಂದಾಗಬೇಕು. ಸ್ಫೂರ್ತಿಯ ಸೆಲೆಯಾಗಿ ನಿಲ್ಲಬೇಕು, ಅವಳೊಂದಿಗೆ ಎನ್ನುವಂತದ್ದನ್ನು ಕಾಣಬಹುದು.

**'ತಪ್ಪದಿರಿಸು'** ಕವನವು ಸ್ತ್ರೀ–ಪುರುಷರ ನಡುವಿನ ವ್ಯತ್ಯಾಸ, ಬಲಾಬಲತೆಯನ್ನು ತಿಳಿಸುತ್ತದೆ.

ಹೆಣ್ಣು ಅಬಲೆ, ಆಕೆ ಬಲಹೀನಳು ಎಂದು ಸಮಾಜ ಮೊದಲಿನಿಂದಲೂ ಆಕೆಯನ್ನು ದ್ವಿತೀಯ ದರ್ಜೆಯಲ್ಲಿಯೇ ಕಾಣುತ್ತಿದೆ. ಎಲ್ಲದರಲ್ಲಿಯೂ ಪುರುಷನಿಗೆ ಮೊದಲ ಪಾಶಸ್ತ್ಯ, ಇದರ ಕುರಿತು ಕವಿ ಹೀಗೆ ಕವಿತೆಯಲ್ಲಿ ತಿಳಿಸುತ್ತಾರೆ.

**ಪುರುಷನೆದೆ ಕಾಠಿಣ್ಯದ ಕೂಡ**
**ಅಹಂಭಾವದ ಪರಿಹರಿಸುತ**
**ಹೆಂಗಳೆಯರಂತ; ಕರಣವ**
**ಅವನೊಳೆಚ್ಚತ್ತಾಗಿರಿಸು;**
**ಹೆಣ್ಣೊಡಲ ಅಬಲೆತನವನು**
**ಅಂತೆ ಬಿಡದೆ ಹೊರದೂಡುತ**
**ಗಂಡೆದೆಯ ಗುಂಡಿಗೆಯನಷ್ಟು**
**ಅವಳಲಿ ತಪ್ಪದಿರಿಸು.**

**(ಪು.ಸಂ.೪೭೭)**

ಹೆಣ್ಣು ಅಬಲೆ ಅಲ್ಲ, ಸಬಲೆ ಎಂಬಂತೆ ಅವಳನ್ನು ಮಾಡಬೇಕು. ಪುರುಷನಲ್ಲಿನ ಕಾಠಿಣ್ಯತೆ ಕೂಡ ಹೆಂಗಳೆಯರ ಅಂತಃಕರಣವನ್ನು ತಿಳಿಯುವಂತೆ ಮಾಡಬೇಕು ಎನ್ನುತ್ತಾರೆ. ಹೆಣ್ಣಿನಲ್ಲಿ ಗಂಡಿನ ಗಂಡೆದೆಯ ಗುಂಡಿಗೆಯನ್ನು ಆಕೆಯಲ್ಲಿ ತಪ್ಪದೇ ಇರಿಸು ಎಂಬುದನ್ನು ಕವಿ ತಿಳಿಸಿದ್ದಾರೆ. ಕವಿ ಇಂತಹ ಹೆಣ್ಣಿನ ಮನಸ್ಥಿತಿಗಳು ಸಮಾಜದಲ್ಲಿ ಇರಬೇಕು ಎಂದು ಬಯಸುತ್ತಾರೆ. ಇಂತವರನ್ನು ಕಾಣಲು ಇಚ್ಚಿಸುತ್ತಾರೆ.

ಹೆಣ್ಣಿನಲ್ಲಿರುವ ಕೆಲವು ಅಂಶಗಳನ್ನು ಪುರುಷನೂ ಅರ್ಥೈಸಿಕೊಳ್ಳುವ ಹಾಗೆ, ಹೆಣ್ಣು ಕೂಡ ಪುರುಷನ ಗಂಡೆದೆಯ ಗುಂಡಿಗೆಯ ರೀತಿ ಧೈರ್ಯದಿಂದ ಕೂಡಿದವಳಾಗಿರಬೇಕು. ಅಂದರೆ ಆಕೆ ಎಲ್ಲದಕ್ಕೂ ಸಬಲಳಾಗಿರಬೇಕು. ಸಬಲಳಾಗಿ ನಿಲ್ಲಬೇಕು ಎನ್ನುತ್ತಾರೆ.

ವಿಧವೆ ಕವನವು ಸಮಾಜದಲ್ಲಿನ ಕೆಟ್ಟ ಆಚರಣೆಯಾದ ವಿಧವಾ ಪದ್ಧತಿಯ ಬಗೆಗೆ ತಿಳಿಸುತ್ತದೆ. ಅಂದರೆ ಹೆಣ್ಣು ಗಂಡ ಸತ್ತ ನಂತರ ಆಕೆ ವಿಧವೆಯಾಗುತ್ತಾಳೆ. ಗಂಡನನ್ನು ಕಳೆದುಕೊಂಡ ಹೆಣ್ಣು ವಿಧವೆ. ಆಕೆಗೆ ಸಮಾಜದಲ್ಲಿನ ಸ್ಥಾನಮಾನ ನಿಕೃಷ್ಟವಾದ ರೀತಿಯಿಂದ ಕೂಡಿರುತ್ತದೆ. ಯಾವುದಕ್ಕೂ ಅರ್ಹಳಲ್ಲ ಎಂದು ಅವಳನ್ನು ಮೂಲೆಗುಂಪಾಗಿ ಮಾಡಿ ಸಮಾಜದ ಮುಖ್ಯವಾಹಿನಿಗೆ ಆಕೆಯನ್ನು ಬರದಂತೆ ತಡೆಗೋಡೆ ಕಟ್ಟಿರುತ್ತಾರೆ ಸಂಪ್ರದಾಯಸ್ಥ ಆಚರಣೆಗಳ ಮೂಲಕ ಹಿರಿಯರು, ನಾಲ್ಕು ಗೋಡೆಗಳ ಬಂಧಿಯಾಗಿಸಿರುತ್ತಾರೆ.

ತಂದೆ ತನ್ನ ಮಗಳಿಗೆ ಅದ್ದೂರಿಯಾಗಿ ಮದುವೆ ಮಾಡಿ ಗಂಡನ ಮನೆಗೆ ಕಳುಹಿಸಿಕೊಡುವುದು ಸತಿ–ಪತಿ ಇಬ್ಬರೂ ಸುಖ–ಸಂತೋಷದಿಂದಿದ್ದರು. ದಾಂಪತ್ಯ ಜೀವನ ಸುಖವಾಗಿತ್ತು ಎಬ್ಬರು ಮಕ್ಕಳು ಆದರು, ಸ್ವಲ್ಪದಿನದ ನಂತರ ಪತಿಗೆ 'ಉದರ ಬೇನೆ' ಕಾಣಿಸಿಕೊಂದಿತು.

**ಕೆಲ ಕಾಲಕೆ ಬರಲು ಉದರ ಬೇನೆಯು ಪತಿಗೆ**
**ಸೊಗದ ಬಾಳ ಬಲೂನಿಗಾರೊ ಚುಚ್ಚಿದರೆನುವ ಹಾಗೆ**
**ಮೊದಲಲಕ್ಷಿಸಿ ಆಮೇಲೆ ಅಲೆದರು ಭೇಷಜಕೆ**
**ಆದರೇನುಣ್ಣುವ ಅನ್ನಕೆ ವಿಧಿ ಬೆರೆಸಿದನು ವಿಷವನೆನೆ**
**ಹಾಯಿ ದೋಣಿಯ ಅರಿವೆ ಒಮ್ಮೆಲೆ ಹರಿದಂತಾಯಿತೆ.**

ವಿಧಿಯ ಆಟ ಸುಖ ಸಂಸಾರದಲ್ಲಿ ನಡೆಯಿತು. ಪತಿ ಕಳೆದು ಕೊಂಡ ಹೆಂಡತಿ ದುಃಖಿತಳಾಗಿದ್ದಾಳೆ. ಹನ್ನೊಂದನೆ ದಿನದ ಆಚರಣೆಗೆ ಶ್ರಾದ್ಧ ಕಾರ್ಯ ಆ ಹೆಣ್ಣಿನ ಸ್ಥಿತಿ ಅಂದು ಶೋಚನೀಯವಾಗಿದೆ. ಅಣ್ಣ ತಂಗಿಯನ್ನು ಹೆಗಲ ಮೇಲೆ ಎತ್ತಿಕೊಂಡು ಬರುತ್ತಿದ್ದಾನೆ.

ತಂಗಿಯನ್ನು ವಿದವೆಯ ರೂಪದಲ್ಲಿ ನೋಡಲು ಸಾದ್ಯವಾಗುತ್ತಿಲ್ಲ. ಬಳೆ ತೆಗೆಯರಿ ಕುಂಕುಮ ಅಳಿಸಿರಿ ಎಂದಾಗ ಅಣ್ಣನ ಉತ್ತರ ಹೀಗಿರುತ್ತದೆ.

**ಅಳಿಸಲಾರೆನೆನ್ನ ತಂಗಿಯ ಕುಂಕುಮವ ಯಾ ಬಳೆಯ**

**ಕುಂಕುಮ ಬಳೆಗಳಿಗಿಂತ ಅಳಿಸಬೇಕಿವಳ ಕಂಬನಿಯ**
**ಮುಟ್ಟಿಬರೆ ಕುಟ್ಟಿ ಕೆಡುಹುವೆನೆಂದಣ್ಣ ಗುಡುಗೆ**
**ರೂಢಿ ತಪ್ಪಿತೆಂದು ಕಂಗಾಲದರು ಹಳೆಯ ಮಂದಿ**
**ಕಿರಿಯರೆದೆಗಳಲಿ ಹೊತ್ತಿ ಕೊಂಡಿತ್ತೊಂದು ಹೊಸ ಜ್ಯೋತಿ**

ವಿಧವೆ ಸಮಾಜದಲ್ಲಿ ಹೀಗೆಯೇ ಇರಬೇಕು ಎಂಬ ರೂಢಿಸಂಪ್ರದಾಯಗಳಿವೆ. ಅವುಗಳನ್ನು ಮೀರಿ ನಡೆಯುವುದಿಲ್ಲ. ಇಲ್ಲಿ ಅಣ್ಣ ಆ ಸಂಪ್ರದಾಯವ ಮುರಿಯುವ ಪ್ರಯತ್ನ ಮಾಡಿದ್ದಾನೆ. ತನ್ನ ತಂಗಿಯ ಕುಂಕುಮವ ನಾ ಅಳಿಸಲಾರೆ ಅಳಿಸಬೇಕಿರುವುದು ಅವಳ ಕಂಬನಿಯನ್ನು ಎನ್ನುತ್ತಾನೆ. ಇಲ್ಲಿ ಅವರ ದುಃಖದನಡುವೆಯೂ ಕೂಡ ಕಂಡುಬರುತ್ತಾರೆ. ಇಂತಹ ಸಂಪ್ರದಾಯಗಳನ್ನು ಸಮಾಜದಿಂದ ಕಿತ್ತೊಗೆಯಬೇಕು. ಅಣ್ಣನಾದವನು ತಂಗಿಗೆ ಜೀವನದ ಕತೆಯ ಬಗ್ಗೆ ತಿಳಿಸುತ್ತಾರೆ. 

**ಯಾಕಳ್ತೀ ತಂಗಿ ಮರೆತಿಲ್ಲವೆ ಸಂಗ್ತೀ**
**ಕೊನೆಯಿಲ್ಲದ ಜೀವನದ ಕತೀ**
**ಬೆಣ್ಣೆಯಿಲ್ಲದ ಬಾಯಿ ಎಣ್ಣೆಯಿಲ್ಲದ ನೆತ್ತಿ**
**ಹಣೆಯ ಬರಹವೊಂದೇ ಗಟ್ಟೆ.**

ಅಣ್ಣನಾದವನು ತಂಗಿಗೆ ಜೀವನದ ಕುರಿತು ಹೇಳುತ್ತಾನೆ. ಯಾಕೆ ಅಳುತ್ತಿಯೇ ಈ ಜೀವನದ ಕತೆಗೆ ಕೊನೆಯಿಲ್ಲ ಹಣೆ ಬರಹವಿದ್ದ ಹಾಗೆ, ಎದೆಯೊಳಗೆ ದುಃಖ ದುಪ್ಪಟ್ಟಿದ್ದರೂ ಹತ್ತು ಧೈರ್ಯದ ಹಡಗಿನಷ್ಟು, ನಿನ್ನ ನಡೆಯಿರಲಿ, ಎಲ್ಲಿಯೂ ಕುಗ್ಗಬೇಡ ಎಂದು ಹೇಳುತ್ತಾನೆ. ನೀನಿರುವ ತನಕ ನಿನ್ನೊಂದಿಗೆ ಧೈರ್ಯವಿರಬೇಕು. ಶಕ್ತಿ ಇರಬೇಕು ಎಂದು ಧೈರ್ಯ ತುಂಬುತ್ತಾನೆ.

ತಂಗಿಗೆ ಸಾವಿನ ಬಗ್ಗೆ ತಿಳಿಸುತ್ತಾನೆ. ಸಾವಿರದ ಮನೆ ಯಾವುದು ಎನ್ನುತ್ತಾನೆ.

**'ಹರಿದು ಹೋಗಿದೆ ತಂಗಿ ಹೊಳೆಯೊಳಗೆ ಎಷ್ಟೋ ನೀರು**
**ಹೋಗು ಸಾಗರವನು ವಿಚಾರಿಸು.**

ಹೊಳೆಗೆ ಹೋಲಿಕೆ ನೀಡುತ್ತಾ ಹೇಳುತ್ತಾರೆ. ಹೊಳೆಯ ನೀರು ಸಾಗರಕ್ಕೆ ಹರಿದು ಹೋಗಿಲ್ಲವೇ ಹಾಗೆ ಜೀವನದಲ್ಲಿ ಸಾವು-ನೋವು ಎನ್ನುವಂತದ್ದು. ರಾಗೌ ಅವರ ಕವನ ಸಾಮಾಜಿಕ ಸಾಂಪ್ರದಾಯಿಕ ಅನಿಷ್ಟವೊಂದರ ನಾಶದೊಡನೆ ಮಾನವತೆಯ ರೂಪವನ್ನು ಇಲ್ಲಿ ಧರಿಸುತ್ತದೆ.

ವಿಧವೆ:

ಬದುಕು ಅನಿರೀಕ್ಷಿತವಾಗಿ ತೆರೆದುಕೊಳ್ಳುವ ತಿರುವು ಅನಪೇಕ್ಷಿತ ತಿರುವೊಂದಕ್ಕೆ ಸಮಾಜ ವೈಧವ್ಯದ ಸ್ಥಿತಿಯನ್ನು ಹೇರಿ ವಿಧಿಸುವ ಕಟ್ಟುಪಾಡು 'ವಿಧವೆ' ಕವನದ ವಸ್ತು. ಆ ಕಟ್ಟುಪಾಡಿನ ಬಗೆಗೆ ಯಾತನೆ ಮತ್ತು ಪ್ರತಿಭಟನೆಯೂ ಇಲ್ಲಿ ವ್ಯಕ್ತಿವಾಗಿದೆ. ವಿಧವೆಂದು ಅಣ್ಣನ ಮೂಲಕ ವ್ಯಕ್ತವಾಗುವ ಪ್ರತಿಭಟನೆ ಕಿರಿಯ ತಲೆ ಮಾರಿನವರಲ್ಲಿ ಹೊಸ ಜ್ಯೋತಿಯ ಉದಯಕ್ಕೆ ಕಾರಣವಾಗುತ್ತದೆ. ಚಲನ ಶೀಲ, ಸಮಾಜದ ಹೊಸ ಬೆಳವಣಿಗೆಯೊಂದನ್ನು ತೆರೆದ ಮನಸ್ಸಿನಿಂದ ಸ್ವಾಗತಿಸುವ ಹೃದಯವಂತಿಕೆ ಈ ಕವನದಲ್ಲಿದೆ.

ಹೋದವರು ಹೋದರು. ಇದ್ದವರು ಮೌನಿಗಳಾಗಿ ಮೌನಕಣಿವೆಯಲಿ ಶೋಕಗೀತೆಯಾಡುತ್ತಾರೆ.

ಕಾಲ ಎಂಬುವುದು ನೋವನ್ನು ಮರೆಸುತ್ತದೆ ಎಂಬ ಒಳ್ಳೆಯ ವಿಶ್ವಾಸದಿಂದ ಬಾಳನ್ನು ಸಾಗಿಸಬೇಕು. ಬೇರೆ ದಾರಿಯಿಲ್ಲ ಎಂಬ ದೃಢಭಾವನೆಯೊಂದಿಗೆ ಮುನ್ನಡೆಯಬೇಕು. ಆಗ ಬದುಕು ಸಾರ್ಥಕ.

ಹೀಗೆ ಅಣ್ಣನಾದವನು ತಂಗಿಗೆ ಜೀವನದ ಬಗ್ಗೆ ತಿಳಿಸುವುದನ್ನು ಕಾಣಬಹುದು.

'ವಿಚ್ಛೇದನ' ಕವನವು ಗಂಡ-ಹೆಂಡತಿಯ ಅಗಲಿಕೆಯ ಚಿತ್ರಣ ನೀಡುವುದರ ಜೊತೆಗೆ ವಿಚ್ಛೇದನ ಕೊಡಿಸುವ ನ್ಯಾಯಾಧೀಶರಿಂದಲೇ ಅವರಿಗೆ ಪರಿಹಾರ ಸಿಗುವ ಚಿತ್ರಣ ಕಾಣಬಹುದು. ವಿಚ್ಛೇದನಕ್ಕೆ ಮುಂದಾದ ಗಂಡ ಕೊನೆಗೆ ತಾನೇ ವಿಚ್ಛೇದನ ಪಡೆಯದೆ ಹೆಂಡತಿಯೊಂದಿಗೆ ಜೊತೆಗೂಡಿ ನಡೆವಂತೆ ಒಪ್ಪಿದ್ದನ್ನು ಕವಿತೆಯಲ್ಲಿ ಕವಿ ಕಟ್ಟಿಕೊಟ್ಟಿದ್ದಾರೆ.

ಗಂಡ ಹೆಂಡತಿಯರಲ್ಲಿ ವಿರಸವುಂಟಾಗಿ ವಿಚ್ಛೇದನದ ಹಂತ ತಲುಪುವುದು ಇಂದು ಸಹಜವಾಗಿ ಬಿಟ್ಟಿದೆ. ಅದೇ ರೀತಿಯ ಒಂದು ಚಿತ್ರಣ ಇಲ್ಲಿ

**ವಕೀಲರು ಕೇಳಿದರು ಅವನ**
**'ಏಕೀ ಸುಮ್ಮನೆ ವಿಚ್ಛೇದನ'**
**ಅದಕ್ಕೆ ಅವನು ಹೇಳಿದ.**
**'ಕುರೂಪಿ ಈ ಹೆಂಡತಿಯ**
**ಕಟ್ಟಿಕೊಂಡೇನು ಮಾಡಲಿ ಜೀವನ ಪರ್ಯಂತ.**

ಎನ್ನುತ್ತಾನೆ ಗಂಡ, ಮದುವೆಯಾದಾಗ ಗಂಡನೆ ಆಕೆಯನ್ನು ಕಾಡಿ ಬೇಡಿದವನು. ನಂತರದಲ್ಲಿ ಹೀಗಾಯಿತೆ ಎಂದು ಅವರ ಸಮಸ್ಯೆಗೆ ಪರಿಹಾರ ಕಂಡು ಹಿಡಿಯಲು ವಕೀಲರು ಮುಂದಾಗುವುದನ್ನು ಕಾಣಬಹುದು. ಆದರೆ ನ್ಯಾಯಾಧೀಶನ ಪ್ರವೇಶದಿಂದ ಸಮಸ್ಯೆ ಪರಿಹಾರವಾಗುವುದು. ಪರಿಹಾರ ಬೇರೆಲ್ಲಿಯೂ ಇರಲಿಲ್ಲ. ಆ ದಂಪತಿಗಳಲ್ಲಿಯೇ ಇತ್ತು. ಸಂಸಾರ ರಥ ಸುಗಮವಾಗಿ ಸಾಗಬೇಕೆಂದರೆ ದಾರಿ ಸರಿಯಿರಬೇಕು. ಕಲ್ಲು ಮುಳ್ಳುಗಳು ಸಹಜ. ಅವನ್ನು ಹತ್ತಿಕ್ಕಿ ನಡೆಯಬೇಕು ಎಂಬುದನ್ನು ತಿಳಿಯಬಹುದು.

'ಸ್ತ್ರೀ' ಕವನವು 'ಸ್ತ್ರೀ' ಮಹತ್ವ ಕುರಿತು ತಿಳಿಸುತ್ತದೆ. ಸ್ತ್ರೀಯೇ ! ಮಾಯೆಯಲ್ಲದ ಮಾಯೆ ಎನ್ನುತ್ತಾರೆ ಸ್ತ್ರೀಯರ ಕುರಿತಾದ ಗೌರವ ಭಾವನೆ ಕವಿಯ ಮೂಲಕ 'ಸ್ತ್ರೀ' ಕವಿತೆಯಲ್ಲಿ ವ್ಯಕ್ತವಾಗುತ್ತದೆ.

**ಮಾಯೆಯಲ್ಲದ ಮಾಯೆ! ಸ್ತ್ರೀಯೇ !**
**ಜೀವವೆಲ್ಲವ ಹಿಡಿದಿಡುವ ತಾಯೆ !**
**ಎದೆಯ ಡವ ಡವಗುಡಿಸುವ**
**ನಿನ್ನಾ ಕುಲುಕುವ ಅವಯವ**
**ಆಕಾಶದಿ ಸರಿದಂತೆ ಮೋಡ**
**ಪಲ್ಲವಿಸಿದಂತೆ ಗಿಡಮರ**
**ಹೊಂಗಿರಣ ಹೂವ ಮುತ್ತಿಕ್ಕಿದಂತೆ**
**ಜುಳಜುಳಗೆ ಹೊಳೆ ಹರಿದಂತೆ !**

ಸ್ತ್ರೀ ಮಾಯೆಯಿಲ್ಲದ ಮಾಯೆಯಾಗಿದ್ದಾಳೆ. ಜೀವವೆಲ್ಲವನ್ನು ಹಿಡಿದಿಡುವ ತಾಯಿ ಆಕೆ, ಆಕೆಯನ್ನು ಕವಿ ಹೇಗೆ ಹೋಲಿಸುವುದು. ಆಕಾಶದಲ್ಲಿ ಮೋಡ ಸರಿದಂತೆ, ಗಿಡಮರ ಪಲ್ಲವಿಸಿದಂತೆ ಹೊಂಗಿರಣ, ಸೂರ್ಯನ ಕಿರಣಗಳು ಹೂವಿಗೆ ಮುತ್ತಿಕ್ಕಿದಂತೆ, ಹೊಳೆ ಜುಳ ಜುಳನೆ ಹರಿದಂತೆ ಎಂದು ಸ್ತ್ರೀ ತಾಯಿಯಾಗಿರುತ್ತಾಳೆ. ಅವಳು ಮಾಯೆಯಲ್ಲ ಎಲ್ಲವನ್ನು ಮೀರಿದ ಅದ್ಭುತ ಶಕ್ತಿ.

ಹೀಗೆ ಮಹಿಳೆಯರ ಕುರಿತಾಗಿ ರಾಗೌ ಕಾವ್ಯಗಳಲ್ಲಿ ತಿಳಿಸಿರುವುದರ ಜೊತೆಗೆ ಮಹಿಳೆಯ ಬಗ್ಗೆ, ಆಕೆಯ ಮೇಲಾಗುವ ದೌರ್ಜನ್ಯವನ್ನು ತಡೆಗಟ್ಟುವಲ್ಲಿ ಸಮಾಜದ ಪಾತ್ರವೇನೆಂಬುದರ ಕುರಿತು ಕವಿತೆಗಳಲ್ಲಿ ಅನೇಕ ಅಂಶಗಳು ವ್ಯಕ್ತವಾಗಿರುವುದನ್ನು ಗಮನಿಸಬಹುದು.

# ಅಧ್ಯಾಯ–೪.೪

## ಶ್ರೀ ಸಾಮಾನ್ಯರನ್ನು ಕುರತ ಕವಿತೆಗಳು

ರಾಗೌ ಅವರು ತಮ್ಮ ಕಾವ್ಯಗಳಲ್ಲಿ ಮನುಷ್ಯನ ಬದುಕಿನೊಂದಿಗೆ ಸಾಮಾಜಿಕತೆಯನ್ನು ಸಮನ್ವಯಗೊಳಿಸಿದ್ದಾರೆ. ಬದುಕಿನಲ್ಲಿ ಯಾರನ್ನು ಆಶ್ರಯಿಸದೆ ತನ್ನ ಬದುಕಿನ ಪರೀಕ್ಷೆಯನ್ನು ತಾನೇ ಎದುರಿಸಿ ಯಾವ ವಿಷಜಂತುಗಳಿಗೂ ಸುಲುಕದೆ, ಹೆದರದೆ ತನ್ನಿಚ್ಚೆಯಂತೆ ದುಂಬಿಯ ಹಾಗೆ ಸ್ವತಂತ್ರವಾಗಿ ಜೇನ ಹೀರಿ ಸಮಾಜಕ್ಕೆ ಸಿಹಿಕೊಡುವ ಆದರ್ಶ ಬದುಕನ್ನು ಕಟ್ಟಿಕೋ ಎಂಬ ಸಂದೇಶ ನೀಡಿದ್ದಾರೆ. ಬದುಕನ್ನು ಮನಬಂದಂತೆ ನಡೆಸಿದರೆ ಅದು ಮೂರಾಬಟ್ಟೆಯಾಗುತ್ತದೆ ಎಂಬುದನ್ನು ಹೇಳತ್ತಾ ತಾವು ಕಂಡ ವಾಸ್ತವ ಬದುಕಿನ ಚಿತ್ರಣವನ್ನು ಕವಿ ಕಟ್ಟಿಕೊಟ್ಟಿದ್ದಾರೆ.

ಸಮಾಜವು ವೈವಿಧ್ಯತೆಯಿಂದ ಕೂಡಿದೆ. ಒಂದೇ ರೀತಿಯ ಜನರು ಕಂಡುಬರುವುದಿಲ್ಲ. ಸ್ವಾರ್ಥಿಗಳು, ಮಾತನ್ನು ಬಂಡವಾಳವನ್ನಾಗಿ ಮಾಡಿಕೊಂಡವರು, ಭ್ರಷ್ಠರು, ಲಂಪಟರು, ಸೋಗಲಾಡಿತನವುಳ್ಳವರು, ನೇರ ನುಡಿಯಾಡುವವರು, ಇಂತವರನ್ನೆಲ್ಲಾ ಕವಿ ಕಂಡಿದ್ದರೆ ಇವರ ಕುರಿತಾಗಿ ತಮ್ಮ ಅಭಿಪ್ರಾಯವನ್ನು ಕವಿತೆಗಳ ಮೂಲಕ ವ್ಯಕ್ತಪಡಿಸಿದ್ದಾರೆ. ಹಾಗೂ ಮುಖವಾಡ ಧರಿಸಿದ, ಕಪಟತನವುಳ್ಳ ಹೇಡಿಗಳಂತಹ ಜನರು, ಮತ್ತೊಬ್ಬರಿಗೆ ಸ್ಪೂರ್ತಿ ನೀಡುವ ಹಿರಿಯ ಚೇತನಗಳು, ಪರೋಪಕಾರಿಗಳು, ಬಡತನ, ಮಾನವೀಯತೆ ಇನ್ನಿತರ ವಿಚಾರಗಳು ಇಲ್ಲಿನ ವಿಷಯವಸ್ತುಗಳು. ರಾಗೌ ಅವರ ಕಾವ್ಯಗಳಲ್ಲಿನ ಈ ಎಲ್ಲಾ ಅಂಶಗಳನ್ನು ಪ್ರಸ್ತುತ ಭಾಗದಲ್ಲಿ ಅನಾವರಣಗೊಳಿಸಲಾಗಿದೆ.

**'ಮಾತಿನ ಮಲ್ಲರು'** ಕವನವು ಮಾತನ್ನು ಕುರಿತು ತಿಳಿಸುತ್ತದೆ. ಮಾತೇ ಇವರ ಬಂಡವಾಳ ಎಂದಿದ್ದಾರೆ.

**ಮಾತು ಮಾತು ಮಾತು ಮಾತು**
**ತಡೆ ಬುಡವಿಲ್ಲದೆ ಕೊರೆವರು ಕೂತು !**
**ಇವರು**
**ಬರಿಯ ಬಾಯಿ ಬಡುಕರು**
**ಕಂಡವರ ಸುದ್ದಿಯಲ್ಲೆ ಬಲು ಆಸ್ತಕರು.**
**ಮಾತು ಮಾತು ಮಾತು ಮಾತು**
**ಬೈಗು ಬೈಗು ಕೊರೆವರು ಕೂತು!**

(ಪು.ಸಂ.೧೯)

ಕೆಲವು ಮಂದಿಗೆ ಮಾತೇ ಬಂಡವಾಳ. ಬರೀ ಬಾಯಿ ಬಡುಕರು. ಮಾತಿನಲ್ಲಿ ಯಾವುದೇ ತಿರುಳಿರುವುದಿಲ್ಲ. ತಡೆಬುಡ ಇಲ್ಲದಂತೆ ಕೂತು ಮಾತನಾಡುತ್ತಾರೆ. ಬೇರೆಯವರ ವಿಷಯದಲ್ಲಿ ತುಂಬಾ ಆಸಕ್ತರು. ಇವರು ದಿನವೆಲ್ಲಾ ಕೂತು ಮಾತನಾಡುತ್ತಾರೆ. ಅವರದು ಬರೀ ಮಾತು.

ಗಲ್ಲಿ, ಬೀದಿ, ನಾಟಕ, ಸಿನಿಮಾ ಇದೇ ಇವರಿಗೆ ವಸ್ತು ಕಥೆಗಳಾಗಿರುತ್ತವೆ. ಇದರ ಹೊರತಾಗಿ ಬೇರೆ ಮಾತಿಲ್ಲ, ರಾತ್ರಿ ಮಲಗಿದಾಗ ಮಾತ್ರ ಕೊಡುವುದು ಮಾತಿಗೆ ವಿರಾಮ ಎನ್ನುತ್ತಾರೆ. ಇಲ್ಲಿ 'ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು', ಎಂಬ ಗಾದೆಯನ್ನು ಹಿನ್ನೆಲೆಯಲ್ಲಿ ಗಮನಿಸಬಹುದು.

ಅಂದರೆ ಕೆಲವರು ಸುಮ್ಮನೆ ಮಾತನಾಡುವರು. ಅಂತವರನ್ನು ಸಮಾಜ ಲಘುವಾಗಿ ಕಾಣುತ್ತದೆ ಎಂದು ಕವಿ ಅಭಿಪ್ರಾಯ ಪಡುತ್ತಾರೆ.

**'ಮಾತು'** ಕವನವು ಮಾತಿನ ಕುರಿತಾಗಿ ತಿಳಿಸುತ್ತದೆ. ಮಾತಿನ ಮಹತ್ವವನು ಕಟ್ಟಿಕೊಡುವಲ್ಲಿ ಈ ಕವಿತೆ ಯಶಸ್ಸಿಯಾಗಿದೆ.

**ಮಾತು ಮಾತಿಗೆ ನಿಂತು ಕಾದುವುದ ಕಲಿಯದಿರು**
**ಬೆಣ್ಣೆಯಾಗದೆ ಮಾತು ಕೈಯ ಕಲ್ಲಾಗುವುದು;**
**ಮಾತಿನೊಳಗಣ ಮನಸ ಮಾತು ಬಿಂಬಿಸುವುದು**
**ಎಚ್ಚರಿರುವುದು ಒಳಿತು ಕಿಚ್ಚಾಗುವ ಮೊದಲು;**

ಮಾತು ಮಾತಿಗೆ ಬೇರೆಯವರೊಂದಿಗೆ ಜಗಳವಾಡುವುದು ಬೇಡ, ಮಾತು ಯಾವಾಗಲೂ ಒಳ್ಳೆಯ ರೀತಿಯಿಂದ ಕೂಡಿರಬೇಕು. ನಮ್ಮ ಮಾತು ಮನಸ್ಸಿನ ಮಾತನ್ನು ಬಿಂಬಿಸುತ್ತದೆ ಎನ್ನುತ್ತಾರೆ ಕವಿ.

**"ಮಾತೇ ಸರ್ವಕು ಮೂಲ ಜೀವಜಲ"**

ಮಾತು ಎಲ್ಲದಕ್ಕೂ ಕಾರಣವಾಗಬಹುದು. ಹಾಗಾಗಿ ಮಾತಿನಲ್ಲಿ ಎಚ್ಚರವಿರಬೇಕು. ಅದು ಭೀತಿಯನ್ನು ತೊಲಗಿಸುತ್ತದೆ.

**'ಗುಬ್ಬಿಯ ಗುಡುಕು ಸಾರಸರ ನಡಿಗೆ ಕೋಗಿಲೆಯ ಗಾನ**
**ಇವು ಮೂರು ಸೇರಿದ ಮಾತಿಗಿಲ್ಲ ಪರ್ಯಾಯ'**
**ಬೀಸಿ ಹೋದ ಗಾಳಿಯ ತೆರ ಮಾತು ಬೀತುದಾದರೆ**
**ಕುಸುಮವಿದ್ದರು ಮಕರಂದವಿಲ್ಲದಂತಾಗುವುದು.**

**(ಪು.ಸಂ.೭೪೨)**

ಅಂದರೆ ಕವಿ ಇಲ್ಲಿ ಮಾತು ಎಂಬುದು ಹೇಗಿರಬೇಕು ಎಂಬುದನ್ನು ಹೇಳುತ್ತಾರೆ. ಗುಬ್ಬಿಯ ಗುಟುಕು, ಸಾರಸದ ನಡಿಗೆ, ಕೋಗಿಲೆಯ ಗಾನ ಈ ರೀತಿ ಮಾತು ಇರಬೇಕು ಎನ್ನುತ್ತಾರೆ. ಮಾತು ಬೀಸಿ ಹೋದ ಗಾಳಿಯ ರೀತಿ ಇರಬಾರದು, ಆ ಮಾತು ಹೇಗಿರುತ್ತದೆಂದರೆ ಕುಸುಮ ಇದ್ದೂ ಮಕರಂದ ವಿಲ್ಲದಂತಾಗುವುದು ಎನ್ನುತ್ತಾರೆ. ಮಾತು ಉತ್ತಮ ರೀತಿಯಿಂದ ಕೂಡಿದುದಾಗಿರಬೇಕು, ಒಳ್ಳೆಯ ತನದಿಂದ ಕೂಡಿರಬೇಕು. ಮಾತು ಗಹನವಾಗಿರಬೇಕು ಎಂಬ ಅಂಶವನ್ನು ಇಲ್ಲಿ ಹೇಳಿದ್ದಾರೆ.

**'ಸೋಗು'** ಈ ಕವಿತೆಯು ಸಮಾಜದಲ್ಲಿರುವ ಸೋಗಲಾಡಿ ಜನರ ಕುರಿತು ತಿಳಿಸಿದ್ದಾರೆ ಮಾತಿಗಿಂತಲೂ ಹೆಚ್ಚು ಸೋಗಲಾಡಿತನ ಇರುವುದು ಇ ಜನರಲ್ಲಿ.

**ಮುಖದಿ ಮಂದನಗೆ ಮನದಿ ವಿಷದ ಬಗೆ**
**ಯೋಚನೆ ಹಲಿವ ಹಾವೇನು?**
**ಸಾಕು ಸುಮ್ಮನಿರು ತಿಳಿದೆ ನಾನಿದನು**
**ಮೋಸವನೆ ಮೂಲಧನವಾಗಿಟ್ಟು ಸಾಧಿಸಿದುದೇನು?**
**ಹಳ್ಳಿಯಿಂದ ಬರಿಮಾತಿನ ಸಾರೋಟು,**

**(ಪು.ಸಂ.೭೪೨)**

ಸೋಗಲಾಡಿತನದ ಜನರಿಗೆ ಮಾತಿಗಿಂತಲೂ ಹೆಚ್ಚು ಸೋಗು ಇರುವುದು, ಮೋಸವೇ ಇವರಿಗೆ ಮೂಲ ನೆಲೆ ಮನಸಲ್ಲಿ ವಿಷ ತುಂಬಿಕೊಂಡು ಮಾತಿನ್ನಲಿ ಬೀಗು ತೋರಿಸುತ್ತಾ ಸೋಗು ತೋರುವುದು ಇವರ ಕೆಲಸ. ಇಂತಹ ಜನತೆ ಸಮಾಜದಲ್ಲಿ ಬಹಳಷ್ಟಿದ್ದಾರೆ.

ಸೋಗಲಾಡಿತನದ ಜನರಿಗೆ ಮಾತಿಗಿಂತಲೂ ಹೆಚ್ಚು ಸೋಗು ಇರುವುದು. ಮೋಸವೇ ಇವರಿಗೆ ಮೂಲನೆಲೆ ಮನಸಲ್ಲಿ ವಿಷ ತುಂಬಿಕೊಂಡು ಮಾತಿನಲ್ಲಿ ಬೀಗು ತೋರಿಸುತ್ತಾ ಸೋಗು ತೋರುವುದು ಇವರ ಕೆಲಸ ಇಂತಹ ಜನತೆ ಸಮಾಜದಲ್ಲಿ ಬಹಳಷಿದ್ದಾರೆ ಎನ್ನುತ್ತಾರೆ ಕವಿ.

ಸೋಗಲಾಡಿತನದವರ ಬಳಿ ಮಾತು ಹೇಗಿರುತ್ತದೆ ಎಂದರೆ ಹಳ್ಳಿಯಿಂದ ದಿಲ್ಲಿಯ ತನಕ ಹರಿಯ ಬಿಡುತ್ತದೆ ಅವರದು ಬರಿಮಾತಿನ ಸಾರೋಟು. ಅದಕ್ಕೆ ಲಗಾಮಿನ ನಿಯಂತ್ರಣವೆಂಬುದಿರಲ್ಲ.

ಹೀಗೆ ನಾನು ಬಗೆಯಲ್ಲಿ ಸಮಾಜದಲ್ಲಿನ ಜನತೆ ಕಂಡುಬರುತ್ತಾರೆ.

**'ನಿಜದ ನೇರ'** ಕವನವು ನೇರವಾದ ರೀತಿಯಲ್ಲಿ ಮಾತ ನಾಡುವುದರ ಕುರಿತು ತಿಳಿಸುತ್ತಾರೆ.

ಬಾಳು ಎಂಬುವುದು ಸವೆದ ಹಾದಿಯಲ್ಲಿ ತಾನು ಸವೆದು, ಮೂಕ ಶೋಕದ ಒಳಗೆ ಹುದುಗಿದೆ.

**ಯಾವುದೆಲ್ಲಿದೆ ತಪ್ಪದಲ್ಲಿಯೆ ಹುಟ್ಟದಿದ್ದರೆ ಪುಳಕ**
**ನಿಜವ ನೇರವ ಹುಡುಕ ಹೊರಟ ವೀರಗೆಲ್ಲಿದೆ ಭವಿಷ್ಯ**
**ಬಹರು ಹೋಹರ ನಡುವೆ ಬೀಳುವ ಕಂದರ**
**ದೀಪ ಉರುಳಿಸಿ ಎಣ್ಣೆ ಬಳಿವ ಹೊಟ್ಟೆ ಕಿಚ್ಚಿನ ಬೆಂತರ !**

**(ಪು.ಸಂ.೮೭೦)**

ನಿಜವಾದ ನೇರವಾದ ಮತುಗಳನ್ನಾಡುವಂತಹರಿಗೆ ಭವಿಷ್ಯ ಇಲ್ಲ. ಆತ ವೀರನೇ ಆದರೂ ನಿಜದ ನೆರವ ಹುಡುಕ ಹೊರಟ ವೀರನಿಗೆಲ್ಲಿದೆ ಭವಿಷ್ಯ ಎನ್ನುತ್ತಾರೆ ಕವಿ. ಅವರು ನೇರವಾದ ರೀತಿಯಲ್ಲಿ ಮಾತನಾಡುವಂತವರಲ್ಲ ಎಂದು ಕವಿ ಅಭಿಪ್ರಾಯ ಪಡುತ್ತಾರೆ. ತಪ್ಪನ್ನು ಅವರೇ ಮಾಡಿ ಅವರೇ ಆ ತಪ್ಪನ್ನು ಸರಿಮಾಡುವರಂತೆ ನಟಿಸುವಂತಹ ಹೊಟ್ಟೆ ಕಿಚ್ಚಿನ ಬೆಂತರಗಳ ಹಾಗೆ ಎನ್ನುತ್ತಾರೆ.

ಅಂದರೆ ಇಂತಹ ನಯವಾದ ಮಾತುಗಳನ್ನು ಆಡುವವರಿಗೆ ಇಂದು ಭವಿಷ್ಯ ಇರುವಂತಹದ್ದು. ನೇರವಾದ ಮಾತುಗಳನ್ನಾಡುವವರಿಗೆ ಅಲ್ಲ ಎಂಬುದನ್ನು ಇಲ್ಲಿ ಗಮನಿಸಬಹುದು.

**'ಸ್ವಾರ್ಥಿ'** ಕವನವು ಮನುಷ್ಯನ ಸ್ವಾರ್ಥ ಭಾವನೆಯನ್ನು ಕುರಿತು ತಿಳಿಸುತ್ತದೆ.

ಸಮಾಜವು ಸ್ವಾರ್ಥಿಗಳಿಂದ ತುಂಬಿದೆ. ಹರಿಯುವ ನದಿ ನಂಬಿದ ಬಯಲು, ಭೂಮಿಯನ್ನು ಫಲವತ್ತಾಗಿಸುತ್ತದೆ. ತಾಯಿ ಭೂಮಿ ತಾಯಿ ನಿರಂತರವಾಗಿ ಮನುಷ್ಯನು ಮಾಡುವ ಮಾಲಿನ್ಯವನ್ನು ಸಹಿಸಿಕೊಳ್ಳುವಳು. ನಮ್ಮ ಉಸಿರಾಟಕ್ಕೆ ಅಗತ್ಯವಿರುವ ಸುತ್ತಲ ಪರಿಸರ, ಗಿಡಮರ ಇವೆಲ್ಲವೂ ಹೀಗಿದ್ದರೂ ಈ ಮನುಷ್ಯ ಮಾತ್ರ ಸ್ವಾರ್ಥಿಯಾಗಿದ್ದಾರೆ. ತನ್ನ ಸ್ವಾರ್ಥವನ್ನು ಬದಿಗೊತ್ತಿ ಒಂದಿಷ್ಟು ಜನಪರನಾಗಬೇಕು ಎಂಬುದು ಕವಿಯ ಬಯಕೆ.

**ಕಟ್ಟಿಕೊಂಡಿಹ ತನ್ನ ಭದ್ರ ಚಕ್ರ ಕೋಟೆಯೊಳಗೆ**
**ತಾನೆ ಪ್ರಭುವೆಂಬ ಧೋರಣೆಯದೇಕೆ**
**ಮುಂದೊಬ್ಬ ಕೋಟೆಯೊಡೆದು ಬರಲಾರನೆ**
**ಇಂಥಾವ ಕಲ್ಪನೆಯನ್ನೂ ಹೊಂದದೆ ಬಳಲು ತಿರುವೆ**
**ಕಾಲಮಾನ ಯಾರ ಪರವೂ ವಿರುದ್ಧವೂ ಅಲ್ಲ**
**ಇರುವೆ ಆನೆಯಾಗಿ ಆನೆ ಇರುವೆಯಾಗಿ ಬಿಡಬಹುದಲ್ಲ!.**

**(ಪು.ಸಂ.೮೮೧)**

ಮನುಷ್ಯನನ್ನು ತಾನೇ ಪ್ರಭು ಎಂಬ ಧೋರಣೆ ಬಿಡು. ತನ್ನ ಭದ್ರ ಕೋಟೆಯಿಂದ ಹೊರಬಾ ಎನ್ನುತ್ತಾರೆ. ಕಾಲದು ಯಾರ ಪರವೂ ಅಲ್ಲ, ವಿರುದ್ಧವೂ ಅಲ್ಲ. ಚಿಕ್ಕದ್ದು ತಕ್ಷಣವೇ ದೊಡ್ಡದಾಗ ಬಹುದು. ದೊಡ್ಡದಿರುವಂತಹದ್ದು, ಕಡಿಮೆಯಾಗಿಬಿಡಬಹುದು.

ಅಂದರೆ ಮನುಷ್ಯನಿಗೆ ಯಾವುದೂ ಶಾಶ್ವತ ಅಲ್ಲ, ಹಾಗಾಗಿ ಇರುವಷ್ಟು ದಿನಗಳು ಲೋಕದಲ್ಲಿ ಉತ್ತಮ ರೀತಿಯಲ್ಲಿ ಬದುಕನ್ನು ಸಾಗಿಸಬೇಕು. ಸ್ವಾರ್ಥ ಭಾವನೆ ಬಿಡಬೇಕು. ಎಲ್ಲರೂ ಕಾಲದ ಮುಂದೆ ತಲೆಭಾಗಬೇಕು, ಬದಲಾಗಬೇಕು, ಹಾಗಾಗಿ ಮನುಷ್ಯ ಸ್ವಾರ್ಥ ಭಾವನೆ ಬಿಟ್ಟು ಹೊರ ಬಾ ಎನ್ನುತ್ತಾರೆ.

**'ಮುಖವಾಡ'** ಕವನವು ಮುಖವಾಡ ಧರಿಸಿ ಬದುಕುವ ಜನತೆ ಹೇಗೆ ಸಮಾಜದಲ್ಲಿ ತಮ್ಮ ಪ್ರಾಬಲ್ಯ ತೋರುತ್ತಿದ್ದಾರೆ. ಅವರಿಗೆ ಇರುವ ಸ್ಥಾನಮಾನ ಎಂತದ್ದು ಎಂಬುದರ ಕುರಿತು ಹೇಳುತ್ತಾರೆ.

**ಜಗತ್ತು ತುಂಬ ಬದಲಾಗುತ್ತಿದೆ**
**ಹೊಡೆ ಮೇಲಾದ ಸಾಗರದಂತೆ !**
**ಬೇಡವಾದುದು ಧಾರಾಳವಾಗುತ**
**ಬೇಕಾದುದು ವಿರಲವಾಗುತ್ತಿದೆ !**

ಜಗತ್ತು ತುಂಬಾ ಬದಲಾವಣೆಯಾಗುತ್ತಿರುವುದನ್ನು ಗಮನಿಸಬಹುದು. ಯಾವುದು ಮುಖ್ಯವಾಗಿ ಬೇಕು ಅದು ವಿರಳವಾಗುತ್ತಿದೆ. ಯಾವುದು ಬೇಡವಾಗಿದೆ. ಅದು ಹೆಚ್ಚಾಗಿ ಧಾರಾಳ ರೂಪದಲ್ಲಿ ಸಿಗುತ್ತಿದೆ.

**ನಿಜವಾದ ಮುಖಗಳೆಲ್ಲಿವೆ ಈಗ**
**ಮುಖವಾಡಗಲೇ ಬಹುತೇಕ !**
**ಮರೆಯಾಗುತ್ತಿವೆ;**
**ಮಹಾ ಮೌಲ್ಯಗಳೆಲ್ಲ;**
**ಕಾಣೆಯಾಗುತ್ತಿದ್ದಾರೆ;**
**ಮೌಲ್ಯಗಳಿಗೆ ಕಡಿಬದ್ಧರಾದ ಜನ**
**ಹಾವು ತಿಂದು ನೀರು ಕುಡಿದಂತಾಗಿದೆ ಸಮಾಜ !**

**(ಪು.ಸಂ.೪೦೮)**

ಮುಖವಾಡ ಧರಿಸಿದ ಮುಖಗಳೇ ಇಂದು ಹೆಚ್ಚಾಗಿ ಸಮಾಜದಲ್ಲಿ ಕಂಡುಬರುವುದು. ನಿಜವಾದ ಮುಖಗಳೆಲ್ಲಿವೆ ಈಗ ಎಂದು ಕವಿ ಅಭಿಪ್ರಾಯಪಡುತ್ತಾರೆ. ಮುಖವಾಡ ಧರಿಸಿರುವವರಿಗೆ ಈ ಸಮಾಜದಲ್ಲಿ ಬೆಲೆ. ಸತ್ಯವಂತರಿಗೆ ಸಮಾಜದಲ್ಲಿ ಯಾವುದೇ ಬೆಲೆ ಇಲ್ಲ. ಮುಖವಾಡ ಧರಿಸಿದವರೆ ತುಂಬಿದ್ದಾರೆ. ಬಹುತೇಕ ಸಮಾಜದಲ್ಲಿ ಇವರಿಂದ ಮಹಾಮೌಲ್ಯಗಳೆಲ್ಲವೂ ಮರೆಯಾಗುತ್ತಿವೆ ಎನ್ನುತ್ತಾರೆ.

ಇಲ್ಲಿ ಮನುಷ್ಯ ಹೇಗೆ ನಾನಾ ರೀತಿಯಲ್ಲಿ ಕಾಣಿಸಿಕೊಳ್ಳುತ್ತಾನೆ ಎಂಬುದನ್ನು ಗಮನಿಸಬಹುದು. ಮುಖವಾಡದ ಜನತೆ ಹೊರನೋಟವೇ ಬೇರೆ. ಅವರ ಒಳಮನಸ್ಥಿತಿಯೇ ಬೇರೆ ರೀತಿ. ಇಂತಹ ವೇಷ ತೊಟ್ಟ ಜನತೆಯಿಂದ ಸಮಾಜವನ್ನು ಉತ್ತಮ ರೀತಿಯಲ್ಲಿ ನಿರ್ಮಾಣಮಾಡಬೇಕು ಎಂದು ಎಚ್ಚರಿಸುವ ಪ್ರಯತ್ನ ಇಲ್ಲಿದೆ.

**'ಗೂಳಿಗಳು'** ಕವನವು ಸಮಾಜದಲ್ಲಿನ ಕೆಲವು ಮಂದಿ ಬಾಳಿಗಳ ರೂಪದಲ್ಲಿ ಕಂಡು ಬರುತ್ತಾರೆ. ಇಂಥವರ ಕುರಿತು ತಿಳಿಸುತ್ತದೆ.

ಗೂಳಿಗಳನ್ನು ಸಾಂಕೇತಿಕತೆ ಬಳಸಿ ಕವಿ ಸಮಾಜದ ಕೆಲವರನ್ನು ಅದಕ್ಕೆ ಹೋಲಿಸಿದ್ದಾರೆ. ಗೂಳಿಗಳು ಅಂದರೆ ಊರಿನ ಬಸವಗಳು, ಅವುಗಳು ಅವರ ಇಚ್ಚೆಯಂತಿರುತ್ತದೆ. ಹಾಗೆ ಸಮಾಜದಲ್ಲಿನ ಕೆಲವು ಮಂದಿ, ಸಮಾಜದಲ್ಲಿ ಗೂಳಿಗಳಂತಹ ಜನರಿದ್ದಾರೆ. ಅವರು ಇಷ್ಟ ಬಂದಂತೆ ನಡೆದುಕೊಳ್ಳುತ್ತಿರುತ್ತಾರೆ. ಅಂತವರ ಕುರಿತು ಕವಿಯು ಹೇಳುವಂತಹದ್ದು.

**ಹೊಲವೇನೊ ಹುಲುಸು, ತೆಗೆದ ಫಸಲು**
**ಬೆಳೆದವನಿಗೆಲ್ಲಿ ಬೆಳೆ, ಬಸವಗಳ ಪಾಲು**
**ಎಲ್ಲ ಕಡೆ ಮೇದ ಮೋಟು;**
**ಅಚ್ಚಿದರೆ ಹೋಗವು, ಅಟ್ಟಿಸಿಕೊಂಡೇ ಬರುವುವು.**

ಬೆಳೆವ ಬೆಳೆ ಕಷ್ಟಪಟ್ಟು ರೈತ ಮಾಡುತ್ತಾನೆ. ಅವನ್ನು ಊರಿನ ಬಸವ, ಗೂಳಿಗಳು ಬಂದು ತಿಂದು ಹೋಗುವುದು, ಇದೇ ರೀತಿಯ ಮಂದಿ ಸಮಾದಲ್ಲಿದ್ದಾರೆ. ಅವರನ್ನು ವಿರೋಧ ಮಾಡಿದರೆ, ಅವರ ತಪ್ಪನ್ನು ಹೇಳಿದರೆ ನಮ್ಮ ಮೇಲೆ ತಿರುಗಿ ಬೀಳುವಂತವರು. ಹಾಗಾಗಿ ಇಂತವರಿಂದ ತುಂಬಾ ಎಚ್ಚರಿಕೆಯಿಂದ ಸಮಾಜದಲ್ಲಿ ಇರಬೇಕು.

**ಮೇವಿನ ತಾಣಗಳೆಲ್ಲ ಗೊತ್ತಿವೆ ಇವಕೆ**
**ನೀರಿನೊರತೆಗಳು ಕೂಡ ಹಾಗೆಯೇ;**
**ಮೇಯ ಹೊರಟರೆ ಬೇಲಿ ಎಲ್ಲಿದೆ?**
**ತಡೆವ ಒಡೆಯರಿಗೆ ಇನ್ನೂ ನಿದ್ದೆ !**
**ಉಳಿಗಾಲವಿಲ್ಲ ಇವುಗಳಿಂದ ನಮಗೆ**
**ಅಟ್ಟಿಸಿಕೊಂಡು ಕೂಡದಿದ್ದರೆ ದಂಡಿಗೆ**
**ಎಚ್ಚರವಿದ್ದು ಕಾವಲಾಗದಿರೆ ಒಡೆಯರು**
**ಭವಿಷ್ಯವಿಲ್ಲ ಸ್ವಾಮಿ ನಮ್ಮ ಬೆಳೆಗೆ !**

**(ಪು.ಸಂ.೧೨೮)**

ಅಂದರೆ ಗೂಳಿಗಳ ರೂಪದಲ್ಲಿ ಕಂಡು ಬರುವ ಮಂದಿಗೆ ಮೇವಿನ ತಾಣಗಳು ತಿಳಿದಿದೆ. ಇವರ ಮೇವಿಗೆ ಬೇಲಿ ಎಂಬುದೇ ಇಲ್ಲ ಎನ್ನುತ್ತಾರೆ. ಅವರನ್ನು ತಡೆಯುವ ಒಡೆಯರು

ಇನ್ನೂ ನಿದ್ದೆಯಲಿದ್ದಾರೆ. ಇಂಥಹ ಮಂದಿಯಿಂದ ಉಳಿಗಾಲವಿಲ್ಲ. ಎಚ್ಚರಿಕೆಯಿಂದ ಕಾವಲಾಗಿರಬೇಕು, ಇಂಥ ಮಂದಿಗೆ ಇಲ್ಲವಾದಲ್ಲಿ ಭವಿಷ್ಯ ಇಲ್ಲ, ಬೆಳೆಗೆ ಎನ್ನುತ್ತಾರೆ ಕವಿ.

ಸಮಾಜದಲ್ಲಿನ ಗೂಳಿಗಳ ರೂಪದ ಜನರುಗಳಿಂದ ತುಂಬಾ ಎಚ್ಚರಿಕೆಯಿಂದಿರಬೇಕು. ಅಂತವರಿಂದ ಉತ್ತಮ ಭವಿಷ್ಯ ಇಲ್ಲ ಎಂಬುದನ್ನು ಗಮನಿಸಬಹುದು. ಹಾಗೆಯೇ ಇಂದಿನ ಹದಗೆಟ್ಟ ಸ್ಥಿತಿಯನ್ನು ತಿಳಿಯಬಹುದು.

ಕವಿ ಇಲ್ಲಿ ಹದ್ದು ಮೀರಿದ ಗೂಳಿಗಳನ್ನು ತಡೆಯಬಲ್ಲ ಒಡೆಯರನ್ನು ಎಚ್ಚರಿಸುವ ಪ್ರಯತ್ನವಿರುವುದನ್ನು ಕಾಣಬಹುದು.

**'ಸಾರವನು ಕಾಯದಿರೆ'** ಕವನವು ಸಮಾಜದಲ್ಲಿನ ಕೆಟ್ಟ ಪರಿಸ್ಥಿತಿಯ ಕುರಿತು ತಿಳಿಸುತ್ತದೆ.

ಸಂಭ್ರಮಿಸಿ ಕುಣಿಯುವ ಮಂದಿ ಇರುವ ಪಕ್ಕದಲ್ಲೇ ನರಳುವಂತಹ ಅಮಾಯಕ ಜನಗಳು ಇರುತ್ತಾರೆ. ಅಮಾಯಕರಿಗೆ ದನಿಯಾಗುವ ನಾಯಕ ಬರಲಾಗದೆ ಅವರ ಭವಿಷ್ಯ ಹಾಳಾಗಿದೆ ಎನ್ನುತ್ತಾರೆ.

**ಮೆರೆದವರು ಮೆರೆಯುತ್ತಲೇ ಇದ್ದಾರೆ**

**ಉಳಿದವರನ್ನು ಮರೆಯಲಾಗುತ್ತಿದೆ;**

ಮೆರೆಯುತ್ತಿರುವವರು ಮೆರೆಯುತ್ತಲೇ ಇದ್ದಾರೆ, ಉಳಿದವರು ಮರೆಯಲಾಗುತ್ತಿದೆ ಎನ್ನುತ್ತಾರೆ.

ಮೆರೆದವರ ಮುಂದೆ ಉಳಿದವರು ಮೂಲೆ ಗುಂಪಾಗಿದ್ದಾರೆ. ಉಳಿದ ಅಮಾಯಕರು ಇವರನನು ಹಿಂದಕ್ಕೆ ತಳ್ಳಲಾಗುತ್ತಿದೆ.

**ಮುಖವಾಡಗಳು ಪೀಡಿಸುತ್ತಿವೆ ನಮ್ಮನ್ನು**
**ಹಿಂಡಿ ಹಿಪ್ಪೆ ಮಾಡಿ;**
**ಮುಖವಾಡದೊಳಗಿನ ಮುಖಗಳನ್ನು**
**ಮೊದಲು ಅನಾವರಣ ಮಾಡಿ**

ಇಲ್ಲಿ ಕವಿ ಮುಖವಾಡಗಳಿಗೆ ಹೆಚ್ಚು ಮನ್ನಣೆ. ಹಾಗಾಗಿ ಅಂತವರನ್ನು ಮೊದಲು ಅನಾವರಣ ಮಾಡಿ ಎನ್ನುತ್ತಾರೆ. ಮುಖವಾಡಗಳು ಹಿಂಡಿ ಹಿಪ್ಪೆ ಮಾಡಿವೆ ನಮ್ಮನ್ನು ಎಂದು ಹೇಳುತ್ತಾರೆ.

**ಸತ್ಯವೇನೆಂಬುದನು ತಿಳಿಯುವ ಹೊತ್ತಿಗೆ**
**ತಪ್ಪಿಸಿಕೊಂಡಿತ್ತು ಹುಲಿ;**
**ಹರಿಣಕ್ಕಾದ ಗಾಯ ಇನ್ನೂ ಮಾಯದೆ**
**ಚಡಪಡಿಸುತ್ತಿದೆ ಚೀರಿ.**

**(ಪು.ಸಂ.೮೨೨)**

ಮುಖವಾಡದವರ ನಿಜ ಸಂಗತಿ ತಿಳಿಯುವಷ್ಟರಲ್ಲಿ ಅಲ್ಲಿ ಅವರು ತಪ್ಪಿಸಿಕೊಳ್ಳುತ್ತಾರೆ. ಅವರಿಂದಾದ ತಪ್ಪು ಮರೆಯಲಾಗದೆ ಅದರ ಪರಿಣಾಮ ಮತ್ತೊಬ್ಬರ ಮೇಲಾಗಿರುತ್ತದೆ.

ಕೆಟ್ಟ ಛಾಯೆಗಳು ಸಮಾಜವನ್ನು ಕಾಡುತ್ತಿವೆ. ಬೀಡು ಬೀಸಾಗಿ ವಿರಮಿಸಲು ಹವಣಿಸುತ್ತಿವೆ. ಇಂತಹ ಕಾರ್ಯಗಳು ಜರುಗುತ್ತಿವೆ. ಅಂತಃ ಸತ್ವ ಒಂದು ಸರಕಾಗಿ ಹೋಗಿದೆ ಎನ್ನುತ್ತಾರೆ.

ಹಾಗಾಗಿ ಅಂತ: ಸತ್ಯ ಸಾರವನ್ನು ಕಾಯಬೇಕು. ಇಲ್ಲದಿದ್ದರೆ ಕೆಟ್ಟದಾಗುತ್ತದೆ.

**'ಬಂದರೂ ಬರಲಿ ಬಿಡು'** ಈ ಕವನವು ಸಾಮಾನ್ಯರಿಗೆ, ಕಷ್ಟದಲ್ಲಿರುವವರಿಗೆ ನೀಡುವ ಕವಿಯ ಕಿವಿ ಮಾತು ಆಗಿದೆ.

**ಕಷ್ಟ ಕಾರ್ಪಣ್ಯಗಳು ಬಂದರೂ ಬರಲಿ ಬಿಡು**
**ಧೃತಿಗೆಟ್ಟು ಬಲುಕಂದಿ ಕಹಿಯೆನ್ನಬೇಡ;**
**ಕಡಲೆದ್ದು ಮೊರೆದು, ಕವಿದರೂ ತೆರೆಮೋಡ**
**ಹಾಕು ಹುಟ್ಟನು ಮಾತ್ರ ಹಿಂದೆಗೆಯಬೇಡ!**

ಜೀವನದಲ್ಲಿ ಕಷ್ಟ ಕಾರ್ಪಣ್ಯಗಳು ಬಂದರೂ ಬರಲಿ ಬಿಡು, ಯಾವುದಕ್ಕೂ ಹೆದರಬೇಡ. ನಿನ್ನ ದಾರಿಯಲ್ಲಿ ನೀ ಸಾಗು ಹಿಂದಿರುಗಬೇಡ ಎಂದು ಹೇಳಿದ್ದಾರೆ.

ಎಂತಹ ಕಷ್ಟಗಳಿಗೂ ಹೆದರದೆ ಅಗಲು-ಇರುಳು ಎನ್ನದೆ ಮುನ್ನಡೆ ಎನ್ನುತ್ತಾರೆ.

**ಬೇಸತ್ತು ಬಳಲಿದ ನೊಂದೆದೆಯ ತುಂಬ**
**ನಟ್ಟರೂ ಬಹುಬಗೆಯ ಭಾವನೆಯ ಕಂಬ.**
**ಬೆದರಿದಿರು ಬೆಚ್ಚದಿರು ಆಗದಿರು ಹುಂಬ**
**ನಡೆನೋಡಿ ತಿಳಿ ಬದುಕ-ಎಚ್ಚರದಿ ತುಂಬ!**

**(ಪು.ಸಂ.೩೩)**

ಜೀವನದಲ್ಲಿ ಬೇಸತ್ತು ಬಳಲಿಕೆ ಇರುತ್ತವೆ. ನೋವು ಎಂಬುದು ಇರುತ್ತದೆ. ಅವುಗಳಿಗೆ ಯಾವುದಕ್ಕೂ ಎದರದೆ ಬದುಕನ್ನು ತುಂಬಾ ಎಚ್ಚರದಿಂದ ನಡೆಸು ಎನ್ನುತ್ತಾರೆ.

ಕಷ್ಟಗಳು ಮನುಷ್ಯನಿಗೆ ಬರುವುದು, ಅವು ಬಂದರೂ ಬರಲಿ ಬಿಡು. ಅವುಗಳಿಂದ ಯಾರೂ ದೃತಿಗೆಡಬಾರದು ಎಂಬುದನ್ನು ಇಲ್ಲಿ ತಿಳಿಯಬಹುದು.

**'ಕಣ್ಣ ತುರಿಕೆ'** ಕವನವು ಸಮಾಜದಲ್ಲಿನ "ವಿಭಿನ್ನ ಮನೋಭಾವದ ಜನರ ಕುರಿತು ತಿಳಿಸುತ್ತದೆ".

**ಮೇಲೆ ಬೇರೆ ಮಾತಾಡಿ ಒಳಗೆ ಬೇರೆ ಕೊಯ್ಯುವವರ**
**ಹೇಗೆ ನಂಬಲಿ ತಂದೆ;**
**ಕುರ್ಚಿಗೆ ಕೂರಲು ಹೇಳಿ ಕೂಡಲೆ ಕುರ್ಚಿ ಎಳೆಯುವುದು.**
**ಬಹಳ ಕಾಲದ ದಂದೆ !**

ಕವಿ ಇಲ್ಲಿ ಸಮಾಜದಲ್ಲಿನ ಜನರ ಬಗೆಗೆ ತಮ್ಮದೇ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಜನರ ಅಂತರಂಗವೇ ಬೇರೆ ಅವರ ಬಹಿರಂಗದ ಬದುಕೇ ಬೇರೆ ಎನ್ನುತ್ತಾರೆ. ಎಂತಹ ಜನರಿದ್ದಾರೆ

ಎಂದರೆ ಕುರ್ಚಿಯ ಮೇಲೆ ಕೂರಲು ಹೇಳಿ ಕೂಡಲೇ ಕುರ್ಚಿ ಎಳೆದು ಬೀಳಿಸುವಂತ ಜನತೆ ಇದ್ದಾರೆ ಎನ್ನುತ್ತಾರೆ. ಇಂತಹ ಮಂದಿಯನ್ನು ಊಸರವಳ್ಳಿಗೆ ಹೋಲಿಸಿದ್ದಾರೆ.

ಹುಲ್ಲೆವೇಷದ ಹುಲಿಗಳ ರೀತಿ ಇದ್ದು ಅವರ ನಿಜವಾದ ಬಣ್ಣವನ್ನು ತೆರೆಯಲಾರರು. ಅಂತವರು ತುಂಬಾ ಮಂದಿ ಇದ್ದಾರೆ ಎನ್ನುತ್ತಾರೆ. ಇಂತಹ ಜನತೆ ಕುರಿತಾಗಿ ಈ ಕವಿತೆ ಚಿತ್ರಣಗೊಂಡಿದೆ.

**ಕಪಟತನದ ಉಪಟಳದಿ ಸಹ್ಯವಾಗದು ಬದುಕು**
**ದುರ್ಬಲವಾಗುವುದಯ್ಯ ಸಜ್ಜನಿಕೆ;**
**ಋಜುವಾದುದೊಂದೂ ಪ್ರಜಾಮಾರ್ಗವನಾಳದಿದ್ದಾರೆ**
**ತಪ್ಪದು ತಂದೆ ಈ ಕಣ್ಣ ತುರಿಕೆ**

**(ಪು.ಸಂ.೧೭೮)**

ಕಪಟತನ, ಉಪಟಳ ಇವುಗಳಿಂದ ಸಜ್ಜನಿಕೆ ದುರ್ಬಲವಾಗುತ್ತಿರುವುದನ್ನು ಗಮನಿಸಬಹುದು. ಒಳ್ಳೆಯದು ಪ್ರಜಾಮಾರ್ಗವನ್ನು ಆಳದಿದ್ದರೆ ಈ ಕಣ್ಣ ತುರಿಕೆ ತಪ್ಪದು ಎನ್ನುತ್ತಾರೆ.

ಉತ್ತಮ ಜೀವನ ಉತ್ತಮ ಸಮಾಜದ ನಿರ್ಮಾಣದಿಂದ ಸಾಧ್ಯ. ಆ ಸಮಾಜದ ಮೇಲಾಗುವ ಪರಿಣಾಮ ಹಾಗೂ ಜನರ ಪಾಡನ್ನು ಕುರಿತು ಈ ಕವಿತೆ ಚಿತ್ರಿಸುತ್ತದೆ.

**'ಹೇಡಿ'** ಈ ಕವಿತೆಯು ಸಮಾಜದಲ್ಲಿ ಹೇಡಿಯ ರೀತಿ ವರ್ತಿಸುವ ಜನರ ಕುರಿತು ತಿಳಿಸುತ್ತದೆ.

ಯಾವಾಗಲೂ ಬೇರೆಯವರಿಗೆ ಮೋಸ ಮಾಡುವ ಉಪಾಯ ಮಾಡುವಂತವರು, ಅವರ ರೋಮ ರೋಮಗಳು, ಮುಳ್ಳುಗಳ ರೀತಿ ಎನ್ನುತ್ತಾರೆ ಕವಿ. ಅಂತಹ ಪರಿಗೆ ಹೇಡಿಯೊ ನಾನು ಹೆಂಬೇಡಿ ಎನ್ನುವಂತದ್ದನ್ನು ಈ ಕವಿತೆ ಚಿತ್ರಿಸುತ್ತದೆ.

**ಹೊರಗೆ ಕ್ರಾಂತಿಕಾರಿ ಒಳಗೆ ಊಸರವಳ್ಳಿ**
**ವರ ನಿಲುವಿಗೇನು ಬರ ಅಸ್ಥಿರವಾದಿ,**

ಅಂದರೆ ನೋಡುಗರಿಗೆ ಇವರು ದೊಡ್ಡ ಕ್ರಾಂತಿಕಾರಿಗಳ ರೀತಿ ಇರುವುದು. ಆದರೆ ಒಳಗೆ ಮಾತ್ರ ಬಣ್ಣ ಬದಲಿಸುವಂತಹ ಊಸರವಳ್ಳಿ ಎನ್ನುತ್ತಾರೆ.

**ಲೋಕಹಿತ ನೆಪದಿ ಸ್ವಂತ ಹಿತಕೆ ಗುಂಪ ರಚಿಸಿ**
**ಒಲಿಯದವರ ಬಲಿಪಶುಗಳನ್ನಾಗಿಸಲು ನೋಡಿ**
**ತನ್ನ ಮೂಗಿನ ನೇರ ಕನ್ಯೆ ಮೂಗುಗಳ ಸೆಳೆವ ಹದನಕೆ**
**ಹೇಡಿಯೋ ನಾನು ಹೆಂಬೇಡಿ.**

ಲೋಕದ ಒಳಿತಿಗೆಂದು ಮಂದಿ ನೆಪಮಾಡಿ ಸ್ವಂತ ಹಿತಕ್ಕೆ ಗುಂಪುಗಳನ್ನು ಮಾಡಿಕೊಂಡು ಅವರ ಮಾತಿಗೆ ಯಾರು ಒಲಿಯುವುದಿಲ್ಲ. ಅಂತವರನ್ನು ಬಲಿಪಶುಗಳನ್ನಾಗಿ ಮಾಡುವಂತವರು ಅವರ ಹೇಡಿಗಳು ಎನ್ನುತ್ತಾರೆ.

**ತತ್ವಕ್ಕಿನಿಡು ಕಿಮ್ಮತ್ತೆಲ್ಲಿದೆ ರಾಜಿಗೆ ರಹದಾರಿ**
**ಮುಖವಾಡದೊಳಗೆ ಪ್ರಜಾಸತ್ತೆ ಬಂದಿ;**
**ಅಣಕದ ಈ ನವನಾಟಕದಲ್ಲಿ ವಿದೂಷಕರದೆ ಗೆಲುವು**
**ಹೇಡಿಯೋ ನಾನು ಹೆಂಬೇಡಿ.**

**(ಪು.ಸಂ.೧೬೭)**

ಪ್ರಜಾಸತ್ತೆಯಲ್ಲಿ ಮುಖವಾಡದವರೇ ಹೆಚ್ಚು, ಇಂತವರಿಗೆ ತತ್ವಗಳ ಕಿಮ್ಮತ್ತಿಲ್ಲ ಎನ್ನುತ್ತಾರೆ. ಊಸರವಳ್ಳಿಯ ರೀತಿ ಕ್ಷಣಕ್ಕೊಮ್ಮೆ ಬಣ್ಣ ಬದಲಿಸುವ ಜನತೆ ಕುರಿತಾಗಿದೆ. ಎಲ್ಲರನ್ನು ತನ್ನ ಹಿಡಿತದಲ್ಲಿರಿಸಿಕೊಂಡು ತಾನೇ ಬಲ್ಲವನೆಂದು ಎಲ್ಲರನ್ನು ಮರುಳು ಮಾಡುವಂತವರು ಇವರು.

**'ಬಾಳೆಂಬ ನಾಟಕದೊಳಗೆ'** ಕವನವು ಬದುಕನು ಕುರಿತಾದುದಾಗಿದೆ.

ಬಾಳು ಒಂದು ನಾಟಕದಂತೆ, ಬಾಳೆಂಬ ನಾಟಕದಲ್ಲಿ ಕಲಿತಿರುವುದಕ್ಕಿಂತ ಇನ್ನು ಕಲಿಯುವುದು ಬಹಳಷ್ಟಿರುತ್ತದೆ.

**ನೇರ ಒರೆ ಹಚ್ಚಲಿಲ್ಲ, ನಟನ ಬಲಾಬಲ**
**ಆದ ಕಾರಣ ನೋಡು ತಕ್ಕಡಿಯಲಿ ಏರುಪೇರು !**
**ಮಾಡದ ತಪ್ಪನು ನೋಡದ ನೀನು ಜಾರಿ**
**ಮಾಡಿರುವ ಶಿಕ್ಷೆಯನು ಮಾತ್ರ, ಇದೆಯೇನು ರಾಜ್ಯಭಾರದ**
**ಸೂತ್ರ, ಕೊನೆಯಿಲ್ಲವೆ ತಂದೆ ಈ ದುರಂತಗಳಿವೆ !**

ಪಾತ್ರದಾರನ ಬಲಾಬಲವನ್ನು ನೇರವಾಗಿ ಪರೀಕ್ಷಿಸಲಿಲ್ಲ. ಹಾಗಾಗಿ ಬಾಳಿನಲ್ಲಿ ಏರುಪೇರುಗಳಿವೆ. ತಪ್ಪು ಮಾಡದವರಿಗೆ ಶಿಕ್ಷೆ ನೀಡುವಂತದ್ದು. ಇಂತಹ ದುರಂತಗಳಿಗೆ ಕೊನೆಯಿಲ್ಲವೇ ಎನ್ನುತ್ತಾರೆ.

**ಸರಿಯಾದ ಮಾನಗಳಲಿ ಅಳೆಯದಿರೆ**

**ನೀನು, ನಾನು ಮಾಡುವುದಾದರೂ ಏನು!**

**(ಪು.ಸಂ.೬೬೧)**

ಸರಿಯಾದ ಮಾನಗಳಲ್ಲಿ ಅಳೆಯದೆ ಹೋದೆ ನೀನು ನಮ್ಮನ್ನು ಬಾಳೆಂಬ ನಾಟಕದಲ್ಲಿ ಎನ್ನುತ್ತಾರೆ. ಆದರೂ ನನ್ನ ಪಾತ್ರದ ಕೆಲಸ ನಾನು ಮಾಡುವೆ. ನೀನು ನೋಡು ನೋಡದಿರು. ಅದರ ಚಿಂತೆ ನನಗೆ ಬೇಡ, ಈ ಬಾಳೆಂಬ ನಾಟಕದೊಳಗೆ ಎನ್ನುತ್ತಾರೆ.

ಅಂದರೆ ಬಾಳು ಒಂದು ನಾಟಕರಂತೆ. ಅದರಲ್ಲಿ ಪಾತ್ರಗಳು ಮುಖ್ಯ. ಕೊಟ್ಟ ಪಾತ್ರಗಳನ್ನು ಬದುಕಿನಲ್ಲಿ ನಿರ್ವಹಿಸಬೇಕು ಎಂಬುದನ್ನು ಇಲ್ಲಿ ತಿಳಿಸಿದ್ದಾರೆ.

**'ಬದುಕು'** ಕವನವು ಬದುಕು ಎಂದರೆ ಎಷ್ಟು ಮಹತ್ವವನ್ನು ಒಳಗೊಂಡಿದೆ ಎಂಬುದನ್ನು ಹೇಳುತ್ತದೆ.

**ಬಾಳು ಎಂಬೋದು ಹಲವು ಮೌಲ್ಯವುಳ್ಳ**
**ಚಲಾವಣೆಯ ನಾಣ್ಯ**
**ಚಿಲ್ಲರೆ ಬೇಕಾದರೆ ಸಿಕ್ಕೀತು**
**ಬಂಧವ ದಕ್ಕಿಸಿಕೊಳ್ಳದಿರೆ**
**ಅರ್ಥವೆಲ್ಲಿದೆ? ಶೂನ್ಯ !**

ಬಾಳು ಎಂಬುದಕ್ಕೆ ಮೌಲ್ಯವಿದೆ. ಅದು ಹಲವು ಮೌಲ್ಯಗಳನ್ನು ಒಳಗೊಂಡಂತಹ ಚಲಾವಣೆಯ ನಾಣ್ಯ ಎಂಬುದು ಕವಿಯ ಅಭಿಪ್ರಾಯ ಅಷ್ಟು ಮುಖ್ಯ ಬಾಳು. ಇಲ್ಲಿ ಬಂಧದಲ್ಲಿ ಸಿಕ್ಕಿಕೊಂಡಿರುವುದು ಸಹಜ.

**ಬದುಕು ಎನ್ನುವುದು ಒಟ್ಟಿನಲ್ಲಿ ಕೆಲವರಿಗೆ**
**ಬೂದಿ ಇರದ ಕೆಂಡ**
**ಮತ್ತೆ ಕೆಲವರಿಗೆ ಅದೇ ಕಾಣುತ್ತದೆ.**
**ಬೂದಿ ಮುಚ್ಚಿದ ಕೆಂಡ.**

**(ಪು.ಸಂ.೨೨೭)**

ಮನುಷ್ಯ ಬದುಕನ್ನು ಒಂದೇ ರೀತಿಯಲ್ಲಿ ನೋಡುವುದಿಲ್ಲ. ಬದುಕು ನಾನಾ ಬಗೆಗಳಲ್ಲಿ ಕಾಣುತ್ತಾನೆ. ಕೆಲವರಿಗೆ ಅದು ಬೂದಿ ಇರದ ಕೆಂಡದ ರೀತಿ , ಇನ್ನು ಮತ್ತೆ ಕೆಲವರಿಗೆ ಅದು ಬೂದಿ ಮುಚ್ಚಿದ ಕೆಂಡವಾಗಿದೆ ಎಂಬುದನ್ನು ಕವಿತೆಯು ಚಿತ್ರಿಸುತ್ತದೆ.

ಬದುಕೆಂದರೆ ಹಾಗೆ, ಶಾಲೆ ಇದ್ದಂತೆ. ಅನೇಕ ಪಾಠಗಳನ್ನು ತಿಳಿಸುತ್ತದೆ, ಅನುಭವಗಳನ್ನು ನೀಡುತ್ತದೆ.

**'ಜನವರಿ ಒಂದು'** ಕವನವು ಹೊಸ ವರ್ಷದ ಸಂಭ್ರಮದ ಆಚರಣೆಯ ಸಂದರ್ಭದ ಕುರಿತು ತಿಳಿಸುತ್ತದೆ.

ಇಲ್ಲಿ ಆಚರಣೆಯ ಪರಿ ಅರ್ಥವಿಲ್ಲದ್ದು, ಅದು ವರುಷ ಉರುಳಿ ವರುಷ ತೆರೆದುಕೊಳ್ಳುವ ದಿನ.

**ದಿಕ್ಕುದೆಸೆಯಿಲ್ಲದ ಪರಿಗೆ ! ಅದೊ ಹನ್ನೆರಡರ ಸಮಯ**
**ಕಿವಿಗಡಚಿಕ್ಕುವ ಪಟಾಕಿ ಸುರು ಸುರು ಬಾಣ !**

ಬೀದಿ ಬೀದಿಗಳಲ್ಲಿ ಬೈಕುಗಳ ಹಿಡಿದ ಸವಾರರ ಅಬ್ಬರದ ಅವಿರತ ನರ್ತನ! ಕೇಕೆ ಕಾಕು ಕುಣಿತ !

**ನಿದ್ದೆ ಹೋದವರಿಗೆ ಸರ್ಪದಷ್ಟನ ಬಳುವಳಿ**
**ಬರುವ ಬದುಕಿಗೆ ಮೊದಲೆ ಬರೆವ ಚಳುವಳಿ !?**

**(ಪು.ಸಂ.೩೨೨)**

ಜನವರಿ ೧ ಆ ದಿನ ಹನ್ನೆರಡರ ಸಮಯ, ಪಟಾಕಿ, ಸುರುಸುರು ಬಾಣದ ಸಂಭ್ರಮ, ಬೈಕ್ ಸವಾರರ ಅಬ್ಬರದ ನರ್ತನ, ಅವರ ಸಂಭ್ರಮ ಸಡಗರಕ್ಕೆ ಅಂದು ಮಿತಿಯೆಂಬುದಿಲ್ಲ. ಅವರ ಕೇಕೆ, ಕುಣಿತದ ಆಚರಣೆಗಳು ನಡೆಯುತ್ತವೆ. ಕವಿ ಇದನ್ನು ಇದು ಒಂದು ರೀತಿ ಮುಂದೆ ಬರುವ ಬದುಕಿಗೆ ಮೊದಲೆ ಬರೆವ ಚಳುವಳಿ ಎನ್ನುತ್ತಾರೆ.

ಹೊಸ ವರ್ಷದ ಸಂಭ್ರಮದ ಆಚರಣೆ ಬಗ್ಗೆ ತಿಳಿಸುತ್ತದೆ. ಈ ಆಚರಣೆ ಅರ್ಥವಿಲ್ಲದ್ದು. ಮೋಜು. ಮಸ್ತಿ, ಆಡಂಬರಕ್ಕೆ ಇವೆಲ್ಲವೂ ನಡೆಯುತ್ತಿದೆ ಎಂಬುದನ್ನು ಗಮನಿಸಬಹುದು.

**'ಎಲ್ಲ ಬಲ್ಲವನೆಂಬ'** ಈ ಕವಿತೆಯು ಅಹಂಕಾರದಿಂದ ಕೂಡಿದೆ. ಗರ್ವಪಡುವ ಮನಸ್ಥಿತಿಯವರನ್ನು ಕುರಿತು ತಿಳಿಸುತ್ತಾನೆ.

ಎಲ್ಲವನ್ನು ತಿಳಿದಿರುವೆನೆಂಬ ಕೆಟ್ಟ ಭಾವನೆಯಲ್ಲಿ ಮನಸ್ಸನ್ನು ಮುಸುಕಿಡುವುದು ಎಷ್ಟು ಸರಿ ಎಂದು ಕವಿ ಪ್ರಶ್ನಿಸುತ್ತಾರೆ. ಎಳೆಯ ನಾಗರಹಾವು ಎಳೆಬಿಸಿಲಿನಲ್ಲಿ ಹೊಳೆಯುತ್ತಿದ್ದರೆ ಅದನ್ನು ನಾವು ಮುಟ್ಟಲು ಹೋಗುವುದು ಸರಿಯೇ!? ಅವರಿಂದ ಕೆಡುಕು ಖಂಡಿತ ಎನ್ನುತ್ತಾರೆ.

**ಹಡಗು ಜಲಧಿಯೊಳು ಕಾಲುಭಾಗವೆ ತೇರಿ**
**ಮುಕ್ಕಾಲು ಮುಳುಗಿಹುದು ನೀರಿನೊಳು ಘನವೆ**
**ಹೊಗಳಿಕೆ ಎಂಬುದು ಹೋಹ ಬಹ ಗರಗಸವದು**
**ಒಳಗೊಳಗೆ ಹುಡಿಮಾಡಿ ತಾ ಸೀಳುತಲಿರೋರೆ**
**ಬಯಲ ಭ್ರಮೆಯಲಿ ಬದುಕ ನೂಕುವುದು.**

**(ಪು.ಸಂ.೨೬೦)**

ಹೀಗೆ ಮನುಷ್ಯನ ಕೆಟ್ಟ ಮನಸ್ಥಿತಿಯು ಇರುವಂತಹದ್ದು. ಹಡಗು ಸಾಗರದಲಿ ಕಾಲು ಭಾಗ ಮಾತ್ರ ತೇಲುತ್ತಾ ಮುಕ್ಕಾಲು ಭಾಗ ಮುಳುಗುವುದು ಸರಿಯೇ. ಆ ರೀತಿಯೇ ಇದು. ಹಡಗು ಸಮಾನ ಮಟ್ಟದಲ್ಲಿ ನೀರನ ಮೇಲೆ ತೇಲುತ್ತಾ ಸಾಗಬೇಕು. ಆಗ ಹೋಗುವ ದಾರಿ ಸುಗಮ. ತಲುಪುವ ಗುರಿ ಸುಗಮವಾಗುತ್ತದೆ. ಅಂತೆಯೇ ಮನುಷ್ಯನಾದವನು ಗರ್ವ, ಅಹಂಕಾರಗಳನ್ನೆಲ್ಲ ಬಿಟ್ಟು ಉತ್ತಮ ವ್ಯಕ್ತಿತ್ವವನ್ನು ಗಳಿಸಿಕೊಳ್ಳಬೇಕು.

ಹಾಗೆಯೇ ಬಾಗಿದ ಬಾಳೆಯ ಗೊನೆಗೆ.ಲ್ಲಿದೆಯಣ್ಣ ಬೀಗು. ತಲೆಯಾಡಿಸಿತೆ, ಎಲ್ಲಿಯಾದರೂ ಎನ್ನುತ್ತಾರೆ. ಹಾಗೆ ಎಲ್ಲ ಬಲ್ಲವನೆಂಬ ಗರ್ವ ತುಂಬಿಕೊಂಡಿರುವ ಮನುಷ್ಯ ಸಮಾಜದಲ್ಲಿ ಕೊನೆಗೆ ಭಾಗಲೇಬೇಕು.

'ದೂರವಿರಿಸು' ಈ ಕವನವು ಸಮಾಜದಲ್ಲಿನ ಕೆಟ್ಟ ಮನಸ್ಥಿತಿಗಳ ಕುರಿತಾದುದಾಗಿದೆ. ನಮ್ಮ ಜೊತೆಯಲ್ಲಿಯೇ ಇದ್ದು ನಮಗೆ ಅಪಾಯವನ್ನು ಒಡ್ಡುವಂತಹ ಜನರನ್ನು ಸಮಾಜದಿಂದ ನಿಮ್ಮಿಂದ ದೂರವಿರಿಸು ಎಂದು ಕವಿ ಹೇಳುತ್ತಾರೆ.

**ಒಳಗೊಳಗೆ ಬಿಡದೆ ಭೇದವನಾಳುವಾತನಲಿ**
**ಸ್ನೇಹ ಮಾಡುವ ಕಲಿತನದಿಂದೆನ್ನ ದೂರವಿರಿಸು**
**ಮುಗುಳು ನಗೆಯಲಿ ಮರವ ಹತ್ತಿಸುತಲಿ**
**ಬುಡವ ಕಡಿಯುವವರಿಂದೆನ್ನ ದೂರವಿರಿಸು.**

ಇವರು ಸ್ವಾರ್ಥ ಮನೋಭಾವನೆಯುಳ್ಳವರು. ಇಂತವರು ತಮ್ಮ ಬಗ್ಗೆ ಮಾತ್ರ ಯೋಚಿಸುವರು. ಬೇರೊಬ್ಬರ ಬಗೆಗಿನ ಚಿಂತೆ ಇಲ್ಲ. ಒಳ್ಳೆಯದನ್ನು ಮಾಡುವ ರೀತಿ ನಟಿಸುತ ಬೆನ್ನಲ್ಲೇ ಚೂರಿ ಹಾಕುವಂತವರು ಇವರು ಎನ್ನುತ್ತಾರೆ.

**ಅವರಿವರ ನಡುವೆ ಬೆಂಕಿ ಹೊತ್ತಿಸುತ ಅಲ್ಲೆ**
**ತಮ್ಮ ಮೈಯ ಕಾಯಿಸುವವರಿಂದೆನ್ನ ದೂರವಿರಿಸು**
**ಹುಸಿ ಕರುಣೆಯ ಹಿಂದೆ ಹಸಿ ಕ್ರೌರ್ಯವನಿರಿಸುವ**
**ಕ್ರೂರ ನಖಗಳಿಂದೆನ್ನ ದೂರವಿರಿಸು.**

**(ಪು.ಸಂ೨೪೭)**

ಬೇರೆಯವರಿಗೆ ಕಷ್ಟಕೊಟ್ಟು ಅದನ್ನು ನೋಡಿ ಖುಷಿ ಪಡುವಂತ ಮಂದಿ ಸಾಕಷ್ಟಿದ್ದಾರೆ. ಕರುಣೆಯ ರೀತಿ ಮುಖವಾಡ ಧರಿಸಿ ಅದರ ಹಿಂದೆಯೇ ಕ್ರೌರ್ಯತೆಯ ರೂಪವನ್ನು ಹೊಂದಿರುವವರು ಇದ್ದಾರೆ. ಇಂಥವರಿಂದ ನನ್ನ ದೂರವಿರಿಸು ಎನ್ನುತ್ತಾರೆ.

ಇಂತಹ ಮನಸ್ಥಿತಿಯವರನ್ನು ಕವಿ ತುಂಬಾ ಹತ್ತಿರದಿಂದ ನೋಡಿದ್ದಾರೆ. ಹಾಗಾಗಿ ಈ ಕವಿತೆಯಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುವ ಮುಖೇನ ಸಮಾಜದಲ್ಲಿ ಇಂಥ ಕೆಟ್ಟವರಿಂದ ದೂರವಿರಿಸು ಎಂದು ಸಮಾಜ ಪರ ಕಾಳಜಿಯನ್ನು ತೋರುತ್ತಾರೆ.

ಸಮಾಜದಲ್ಲಿ ಇಂತವರು ತುಂಬಾ ಇದ್ದಾರೆ. ಅಂಥವರಿಂದ ನಮ್ಮನ್ನು ದೂರವಿರಿಸು ಎಂದು ಹೇಳಿದ್ದಾರೆ.

**'ಸವಾಲು'** ಕವಿತೆಯಲ್ಲಿ ಕವಿಯು ಮಾನವೀಯತೆಯ ಬಗ್ಗೆ ತಿಳಿಸುತ್ತಾರೆ. ಮಾನವೀಯತೆಗೆ ಬೆಲೆ ಇಲ್ಲದ ಸಮಾಜದ ಕುರಿತು ಹೇಳಿದ್ದಾರೆ.

ಬಾಳು ಎಂಬುದು ಪುಸ್ತಕ ಇದ್ದ ಹಾಗೆ, ಬಾಳೆಂಬ ಪುಸ್ತಕದಲ್ಲಿ ದಿನ ದಿನವು ಪುಟಗಳಾಗುತ್ತವೆ. ಅದರಲ್ಲಿ ಬೇವು-ಬೆಲ್ಲದ ಭಾವ ಹತ್ತು ತೆರನಾಗಿರುತ್ತವೆ. ಕಷ್ಟ-ಸುಖ ನಾನಾ ಬಗೆಗಳಿಂದ ಕೂಡಿರುತ್ತವೆ ಎನ್ನುತ್ತಾರೆ.

**ಹಾಳೆ ಮೇಗಲ ಅನ್ನ ಬೇಲಿ ಮೇಗಲ ನೀರು**
**ಕಾಗೆ ಗೂಗೆಗಳ ಕೂಗು ಸಮರ ತೂರ್ಯ.**

ಅಂದರೆ ಇವುಗಳು ವ್ಯರ್ಥವಾದಂತವು ಎಂದು ಹೇಳುತ್ತಾರೆ. ಆದರೂ ಕಾಪಾಡುವವರು ಇಬ್ಬರಿದ್ದಾರೆ. ಕೆಳಗೆ ಭೂಮಿ ತಾಯಿ ಮೇಲೆ ಉರಿವ ಸೂರ್ಯ.

**ಕಷ್ಟ ನಷ್ಟಗಳೆಲ್ಲ ನಾಲ್ಕು ದಿನಗಳ ಮಾತು**
**ಚಿತ್ತ ಸಮತೆಗೆ ಭಂಗಬಾರದಿರಲಿ ತಮ್ಮ**
**ಇದು ಸಾಮಯಿಕ ನುಡಿಯಲ್ಲದೆ ಬೇರಲ್ಲ ಬಿಡು**
**ಗೂಬೆ ಕೂರಿಸದೆ ಬಿಡರು' ತಲೆಯ ಮೇಲೆ !**
**ಹಾಳೆ ಬಿಸಾಡಿ ನಾಯ 'ವೂ' ಬಿಡುವಂತೆ ಅಣ್ಣ**
**ಕಾಮಗಾರಿಕೆ ಇದು ಮಾನವತೆಯ ಬೆಲೆಯೇ?**

**(ಪು.ಸಂ.೨೩೩)**

ಈ ಭೂಮಿಯ ಮೇಲೆ ಕಷ್ಟ ನಷ್ಟಗಳು ನಾಲ್ಕು ದಿನಗಳಷ್ಟೆ. ಮನಸ್ಸನ್ನು ಕುಗ್ಗಿಸಬಾರದು. ತಲೆ ಮೇಲೆ ಗೂಬೆ ಕೂರಿಸುವವರು ಇದ್ದೇ ಇರುತ್ತಾರೆ. ಅದಕ್ಕೆ ತಲೆಗೊಡಬಾರದು. ಸವಾಲಾಗಿ ಸ್ವೀಕರಿಸು ಎನ್ನುತ್ತಾರೆ.

ಹಾಳೆ ಬಿಸಾಡಿ ನಾಯ 'ವೂ' ಬಿಡುವಂತೆ ಕಾಮಗಾರಿಕೆ ಆಗಿದೆ. ಹೀಗಿರುವಾಗ ಮಾನವತೆಗೆ ಬೆಲೆ ಎಲ್ಲಿದೆ ಎನ್ನುತ್ತಾರೆ.

ಅಂದರೆ ಕಷ್ಟ ನಷ್ಟಗಳು ಎಂದಿಗೂ ಶಾಶ್ವತವಲ್ಲ. ಅವುಗಳಿಂದ ಜೀವನದಲ್ಲಿ ಹಿಂದೆ ಸರಿಯದೆ ಸವಾಲಾಗಿ ಸ್ವೀಕರಿಸುವುದು ಮುಖ್ಯ. ಕೆಡುಕನ್ನೆ ಬಯಸುವವರಿದ್ದಾರೆ. ಸಮಾಜದಲ್ಲಿ ಮಾನವೀಯತೆ ಬೆಲೆ ಎಲ್ಲಿದೆ ಎನ್ನುವಂತದ್ದು ಗಮನಿಸಬಹುದು.

**'ಕುತ್ತು'** ಕವಿತೆಯಲ್ಲಿ ಕವಿ ದುಡಿಮೆಯ ಜನತೆಯ ಕುರಿತಾಗಿ ಹೇಳುತ್ತಾರೆ.

**ಎಷ್ಟೊಂದು ದುಡಿದರು ಹೊತ್ತೊಂದು ಕೂಳಿಲ್ಲ**
**ಈ ಜನುಮ ಸಾಕು ಸಾಕ**
**ಬೆವರ ಹರಿಸಿದರು ತುಂಡರಿವೆಯೊಂದಿಲ್ಲ**
**ನಾ ಬಾಳಬೇಕು ಯಾಕ?**

ದುಡಿವ ಜನತೆಯ ಅಸಹಾಯಕ ಪರಿಸ್ಥಿತಿಯನ್ನು ಇಲ್ಲಿ ಕಾಣಬಹುದು. ಎಷ್ಟು ದುಡಿದರೂ ಒಂದು ಹೊತ್ತು ಸರಿಯಾಗಿ ಕೂಳಿಲ್ಲ. ಈ ಜನುಮ ಸಾಕಾಗಿದೆ ಎಂದು ಹೇಳಿಕೊಳ್ಳುತ್ತಿದ್ದಾನೆ. ಹಾಗೆಯೇ ಮುಂದುವರಿದಂತೆ ಅವನ ಸ್ಥಿತಿ ಕುರಿತು ಹೀಗೆ ಹೇಳುತ್ತಾರೆ.

**ಕೂಲಿ ಮಾಡಿದರೂ ಕೂರಿಗೆ ಹೊಡೆದರೂ**
**ಬರಲಿಲ್ಲ ಬಾಯ್ತುಂಬ ತುತ್ತು.**
**ಸಂಜೆಗೆ ಗಂಜಿಲ್ಲ ಎಂಬಂಜಿಕೆ ಹೋಗಲಿಲ್ಲ**
**ಬಡವನ ಬೆನ್ನಂಟಿದ ಕುತ್ತು.**

**(ಪು.ಸಂ.೨೧೩)**

ಬೆಳಗ್ಗೆಯೇ ಬೇಸರ, ಮುಖದಲ್ಲಿ ಯಾವ ಮಂದಹಾಸ, ನಗೆಯು ಇರುವುದಿಲ್ಲ. ಎಷ್ಟು ಕಷ್ಟಪಟ್ಟು ದಿನವಿಡೀ ದುಡಿದರೂ ಅವರಿಗೆ ಸಾಕಾಗುವಷ್ಟು ಊಟ ಸಿಗುವುದಿಲ್ಲ. ಕೂತರೆ ಕೂಳು ಇರುವುದಿಲ್ಲ. ಸಂಜೆಗೆ ಗಂಜಿ ಇಲ್ಲ ಎಂಬಂತಹ ಅಂಜಿಕೆ ಯಾವಾಗಲೂ ಇದು ಬಡವರ ಬೆನ್ನಿಗೆ ಅಂಟಿಕೊಂಡಿರುವ ಕುತ್ತು.

ಜೀವನದಲ್ಲಿ ಕಷ್ಟ ಸುಖಗಳು ಬರುತ್ತವೆ. ಬರಲಿ ಬಿಡಿ ಭಯವೇಕೆ ನಮಗೆ, ನೀರಿನಲ್ಲಿ ಮುಳುಗಾದ ಮೇಲೆ ಚಳಿಯೇನು, ಮಳೆಯೇನು, ಈಜಬೇಕು ಗುರಿಯ ಕಡೆಗೆ ಎನ್ನುತ್ತಾರೆ.

ಅಂದರೆ ಏನೇ ಆದರೂ ಜೀವನದಲ್ಲಿ ಗುರಿ ಸ್ಪಷ್ಟವಾಗಿರಬೇಕು.

**'ಇದ್ದರೆಷ್ಟು ಇಲ್ಲದಿದ್ದರೆಷ್ಟು'** ಈ ಕವನವು ಇರುವಿಕೆಯಲ್ಲಿಯೂ ಇಲ್ಲದಿರುವಂತೆ ಇರುವ ವಿಭಿನ್ನ ಮನಸ್ಥಿತಿ **ಕುರಿತು ಸಮಾಜದ ನೆಲೆಯಲ್ಲಿ ತಿಳಿಸುತ್ತದೆ.**

**ಕಾರ್ಮಿಕನ ನೋವಿಗೆ ಆಗದ ಮಾಲೀಕ**
**ಜನರ ನೋವಿಗೆ ಒಲಿಯದ ಸರಕಾರ**
**ಶಿಷ್ಯನ ನೋವಿಗೆ ಮಿಡಿಯದ ಗುರು**
**ರೋಗಿಯ ನೋವಿಗೆ ಧಾವಿಸದ ವೈದ್ಯ**
**ಇಲ್ಲದವರ ಅಳಲಿಗೆ ತೆರಳದ ಉಳ್ಳವರು**
**ಹೆಂಡತಿಯ ನಲವಿಂದ ನಡೆಸದ ಗಂಡ**
**ಇದ್ದರೆಷ್ಟು ಇಲ್ಲದಿದ್ದರೆಷ್ಟು**
**ಒಂದೆಗೆಯುವುದೆದೆ ಹೇಳುವುದಕ್ಕೂ.** **(ಪು.ಸಂ.೪೨೪)**

ಇಲ್ಲಿ ಕವಿತೆಯಲ್ಲಿ ಗಮನಿಸಿದಂತೆ ಕೆಲವೊಂದು ಇದ್ದರೂ ಇಲ್ಲ ಎನ್ನುವಂತಿದೆ. ಕಾರ್ಮಿಕನ ಕಷ್ಟಗಳಿಗೆ ಮಾಲೀಕನಾದವನು ನೆರವಾಗಬೇಕು. ಆದರೆ ಅದು ಆಗುತ್ತಿಲ್ಲ. ಜನರ ನೋವಿಗೆ ಸ್ಪಂದಿಸದ ಸರ್ಕಾರ, ರೋಗಿಯ ಅಳಲಿಗೆ ಮುಂದಾಗದ ವೈದ್ಯರುಗಳು, ಶಿಷ್ಯನ ನೋವಿಗೆ ಮಿಡಿಯದ ಗುರುಗಳು ಇವುಗಳು ಇದ್ದು ಇಲ್ಲದಂತೆ ಎನ್ನುತ್ತಾರೆ ಕವಿ. ಕವಿ ಇಂತಹ ಮನಸ್ಥಿತಿಗಳನ್ನು ಸಮಾಜದಲ್ಲಿ ನೋಡಿದ್ದಾರೆ. ಅದನ್ನು ಕವಿತೆಯ ಮೂಲಕ ವ್ಯಕ್ತಪಡಿಸುವ ಪ್ರಯತ್ನ ಮಾಡಿದ್ದಾರೆ.

ಯಾವುದೇ ರೀತಿಯ ಅನುಕೂಲ ನೀಡದ ಮತ್ತೊಬ್ಬರಿಗೆ ಸಹಾಯ ಮಾಡದವರು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ ಎಂಬುದನ್ನು ಗಮನಿಸಬಹುದು.

**'ಬಡವ'** ಕವನವು ಬಡಜನತೆಯ ಕುರಿತಾಗಿ ಹೇಳುತ್ತದೆ.

**ಬಡವನ ಸಹನೆ ಸಲಹಿಹುದು**
**ಇಲ್ಲಿಯವರೆಗೆ ಸಿರಿವಂತರನ್ನು**
**ನಡೆಸಿಕೊಂಡಿಹುದವರನು**
**ಕೆಟ್ಟ ರೀತಿಯಲಿ ಲೋಕ;**
**ಬಡವ ಬಡಬಾನಲನಾದರೆ**
**ಎಲ್ಲಿಹನೇನಾ ಕುಬೇರ**
**ತಿಳಿಯದಿರೆ ಈ ನಿಜವ**
**ಶಿಕ್ಷಿಸುವುದು ಕಾಲ !**

**(ಪು.ಸಂ.೪೬೩)**

ಬಡವನಿಗೆ ಸಹನೆ ಇದೆ, ಆ ಸಹನೆಯೇ ಇಲ್ಲಿಯವರೆಗೆ ಸಿರಿವಂತರನ್ನು ಸಲಹಿರುವಂತದ್ದು. ಲೋಕ ಕೆಟ್ಟ ರೀತಿಯಲ್ಲಿ ಬಡವರನ್ನು ನಡೆಸಿಕೊಂಡಿದೆ. ಬಡವ ಬಡಬಾನಲ ಆದರೆ ಕುಬೇರ ಎಲ್ಲಿರುತ್ತಾನೆ ಎಂದು ಪ್ರಶ್ನಿಸುತ್ತಾರೆ. ಈ ಸತ್ಯಾಂಶವನ್ನು ಅರ್ಥಮಾಡಿಕೊಂಡರೆ ಉತ್ತಮ, ಇಲ್ಲದಿರೆ ಕಾಲವೇ ಶಿಕ್ಷಿಸುತ್ತದೆ.

ಬಡವನ ಸಹನೆಗೂ ತಾಳ್ಮೆಗೂ ಒಂದು ಮಿತಿ ಇದೆ. ಅದರ ಎಲ್ಲೆ ಮೀರಿದಾಗ ಆತ ಬಡಬಾಲನವಾಗಿ ಹಿಂಸಿಸುವವರಿಗೆ ಸರಿಯಾದ ಉತ್ತರ ನೀಡುವಂತದ್ದನ್ನು ಕಾಣಬಹುದು.

**'ಮಾರಿಕೊಂಡವರು'** ಕವನದಲ್ಲಿ ಕವಿಯು ಸಮಾಜದಲ್ಲಿ ಹೇಗೆಲ್ಲಾ ಜನರು ವರ್ತಿಸುತ್ತಾರೆ ಎಂಬುದರ ಕುರಿತಾಗಿ ತಿಳಿಸುತ್ತಾರೆ.

ತಮ್ಮನ್ನು ತಾವು ಮಾರಿಕೊಳ್ಳುವುದು, ಜನ ಯಾವುದಕ್ಕಾಗಿ ಮಾರಿಕೊಳ್ಳುತ್ತಾರೆ ಎಂಬುದನ್ನು ಕವಿ ಇಲ್ಲಿ ಹೀಗೆ ಹೇಳುತ್ತಾರೆ.

**ಯಾರ್‍ಯಾರಿಗೊ ಮಾರಿಕೊಂಡವರು**
**ಅನೇಕ;**
**ಯಾರ್‍ಯಾರನೊ ದೂರಿಕೊಂಡವರೂ**
**ಅನೇಕ,**
**ಆದರೇನವರ ನಡುವೆ**
**ಕರ್ತವ್ಯಕ್ಕೆ ಮಾರಿಕೊಂಡವರ**
**ಕಾಣೆ !**
**ಸತ್ಯಕ್ಕೆ ಮಾರಿಕೊಂಡವರ**
**ಕಾಣೆ !**
**ಸ್ವಾಭಿಮಾನಕೆ ಮಾರಿಕೊಂಡವರ**
**ಖಂಡಿತ ಕಾಣೆ !**

ಕವಿ ಇಲ್ಲಿ ಹೇಳುವಂತೆ ಸಮಾಜಕ್ಕೆ ಒಳಿತಿಗಾಗಿ ಮಾರಿ ಕೊಂಡವರಿಲ್ಲ, ಸತ್ಯಕ್ಕೆ ಸ್ವಾಭಿಮಾನಕ್ಕೆ ಅಲ್ಲ, ಪ್ರಾಮಾಣಿಕತೆಗೂ ಅಲ್ಲ, ನರರು ನರರೇ ಕಳೆದು ಹೋಗುತ್ತಿದ್ದಾರೆ. ಅವರ ಇರುವಂತಿಕೆ ಹೇಗೆ ಎನ್ನುತ್ತಾರೆ. ಅಂದರೆ, ಸಮಾಜ್ಕಕೆ ಒಳ್ಳೆಯದನ್ನು ಮಾಡಬೇಕೆನ್ನುವ ಉದ್ದೇಶದಿಂದ ಈ ರೀತಿ ಮಾಡುತ್ತಿಲ್ಲ, ಯಾರ್‍ಯಾರನ್ನೊ ದೂರುತ್ತಾರೆ, ಆದರೂ ತಮ್ಮ ಕರ್ತವ್ಯ ಸರಿಯಾಗಿ ಮಾಡುವುದಿಲ್ಲ ಎನ್ನುತ್ತಾರೆ.

**ಸತ್ಯವಂತರಿಗಿದು ಕಾಲವಲ್ಲ ಎಂದು**
**ನಡೆಯುವುದು ನಿಲ್ಲಿಸದಿರು;**
**ವ್ಯವಹಾರಕ್ಕದು ಸತ್ತಿರಬಹುದು.**
**ಆತ್ಮ ಸಂತೋಷಕ್ಕದು ನಿತ್ಯ ಹಸಿರು !**

**(ಪು.ಸಂ.೮೨೦)**

ಸತ್ಯವಂತರಿಗಿದು ಕಾಲವಲ್ಲ, ಹಾಗೆಂದು ನಡೆಯುವುದನ್ನು ನಿಲ್ಲಿಸದಿರು. ತಾನು ಸಾಗುವ ದಾರಿಯನ್ನು ಬಿಡಬೇಡ. ಸತ್ಯ ವ್ಯವಹಾರದಲ್ಲಿ ಸತ್ತಿರಬಹುದು, ಆದರೆ ಆತ್ಮ ಸಂತೋಷಕ್ಕೆ ಅದು ನಿತ್ಯ ಹಸಿರಾಗಿರುತ್ತದೆ.

ಯಾವುದರಿಂದಲೂ ಮಾಡುವ ಕಾರ್ಯದಲ್ಲಿ ಹಿಂದೆ ಸರಿಯಬೇಡ. ಆಶಾಭಾವನೆ ಮುಖ್ಯ ಎಂದು ಹೇಳಬಹುದು.

**'ಹೊರಲಾರದ ಹೊರೆ'** ಕವನದಲ್ಲಿ ಕವಿಯು ನೋವಿನಲ್ಲಿಯೂ ನಗುವುದು ಕಷ್ಟ ಎನ್ನುತ್ತಾರೆ. ಅಂತಹ ರೀತಿ ನೋವಿನಲ್ಲೂ ನಗಲು ಎಲ್ಲರಿಗೂ ಆಗಲ್ಲ, ಅದು ಯೇಸುವಿಗಿತ್ತು ಎನ್ನುತ್ತಾರೆ.

**ಬಿರುಗಾಳಿ ಬಿರುಮಳೆ ಭಾರವಾಗದು ನಿಜ ಪ್ರಕೃತಿಗೆ**
**ತಹತಹಿಪ ಜೀವಕ್ಕದು ಹೊರಲಾರದ ಹೊರೆ !**

ಪ್ರಕೃತಿಗೆ ಯಾವುದೇ ರೀತಿಯ ಬಾರವೆಂಬುದಿಲ್ಲ. ಎಷ್ಟೆಲ್ಲಾ ಸಹಿಸಿಕೊಂಡಿದ್ದಾಳೆ. ಆದರೆ ಜೀವಕ್ಕೆ ಹೊರಲಾರದ ಹೊರೆಯಾಗಿದೆ. ಇವರ ಕಷ್ಟಗಳೇ ಹೆಚ್ಚು ಎಂದು ಭಾವಿಸುವಂತದ್ದು. ಪ್ರಕೃತಿಯು ಹೊತ್ತಿರುವ ಹೊರಲಾರದ ಹೊರೆಗಿಂತ ಇವರದೇ ಹೆಚ್ಚು ಎಂಬಂತೆ ಇಲ್ಲಿ ಕಂಡು ಬರುತ್ತದೆ.

**'ಹೆದ್ದಾರಿಯಲ್ಲಿಯೂ ಗೊಬ್ಬಳಿ ಮುಳ್ಳು'**

**(ಪು.ಸಂ.೬೪)**

ಜೀವನವೆಂಬ ಹೆದ್ದಾರಿಯಲ್ಲಿ ಇಂತಹ ಕಷ್ಟನಷ್ಟಗಳು ಗೊಬ್ಬಳಿ ಮುಳ್ಳುಗಳಂತೆ ಇವೆ. ಅವು ಅಡ್ಡದಾರಿ ಕವಲುದಾರಿಯಲ್ಲಿ ಮಾತ್ರವಲ್ಲ, ಹೆದ್ದಾರಿಯಲ್ಲೂ ಇದೆ.

ಬೇವು-ಬೆಲ್ಲ ಬೆರೆಸಿ ತಿನ್ನುವುದಿಲ್ಲವೆ ಹೊಸ ವರ್ಷಕ್ಕೆ ತೊಡಗಿಕೊಳ್ಳುವ ಮೊದಲು. ಹಾಗೆಯೇ ಸುಖ-ದುಃಖ ಜೀವನದಲ್ಲಿ ನೋವು-ನಲಿವು ಎಲ್ಲವೂ ಇರುತ್ತವೆ.

**'ಹುತಾತ್ಮರು'** ಕವಿತೆಯಲ್ಲಿ ಕವಿ ಹುತಾತ್ಮರ, ಅವರ ಬದುಕು ಸಾಗಿದ ಬಗೆ ಕುರಿತು ತಿಳಿಸುತ್ತಾರೆ.

ಮಹಾನ್ ವ್ಯಕ್ತಿಗಳ ಹೋರಾಟದ ತ್ಯಾಗದ ಫಲವಾಗಿ ಇಂದು ವಿಮೋಚನೆಯಾಗಿದೆ.

**ಬರಿದೆ ಹುತಾತ್ಮರೇ ನೀವು, ಪೂಜಾತ್ಮರು**
**ವಿಮೋಚನೆಯ ಕಾರಣೀಭೂತರು.**
**ಅಷ್ಟಿಷ್ಟು ಮುಂದುವರಿಯದಿದ್ದರೆ ಈ ದೇಶ ಅದು ನಿಮ್ಮ ತ್ಯಾಗದ ಫಲ;**
**ಇದರಿಂದ ಬಂದಿದೆ ನಮಗೆ ಬಲ !**

ನಾವು ಇಂದು ವಿಮೋಚನೆ ಹೊಂದಿದ್ದೇವೆ ಎಂದರೆ ಅದಕ್ಕೆ ಹುತಾತ್ಮರುಗಳೇ ಕಾರಣೀಭೂತರು. ಈ ದೇಶ ಸ್ವಲ್ಪವಾದರೂ ಮುಂದುವರಿದಿದೆ ಎಂದರೆ ಅದು ನಿಮ್ಮಿಂದ ನೀವು ಮಾಡಿದ ತ್ಯಾಗದ ಫಲ. ಇದರಿಂದ ನಮಗೆ ಬಂದಿದೆ ಬಲ ಎನ್ನುತ್ತಾರೆ.

**ಸಾವಿನೊಡನೆ ಸರಸವಾಡುತ್ತಲೆ ಬಂದು**
**ನಡುವೆ ಬದುಕು ಬೆಳೆದವರು;**
**ಕತ್ತಲೆಯನೆ ಬೆತ್ತಲೆ ಮಾಡುತ ನಡೆದು**
**ಬೆಳಗಿನ ಪುಂಜವಾದವರು;**
**ಮರೆಯಲಾರದು ಕಾಲ, ಮರೆತರೂ ನಾವು**
**ಕಾಯುತ್ತಿದೆ ನಿಮ್ಮಾಶೀರ್ವಾದ ಬಾಹು !**

**(ಪು.ಸಂ.೧೪೨)**

ಸಂಪತ್ತಿಗೆ ಆಸೆ ಪಡದೆ ಅಧಿಕಾರಕ್ಕೆ ಆಸೆ ಪಡದೆ ನಾಡಿಗಾಗಿ ಶ್ರಮಿಸಿದವರು. ನೀವೆ ನಮಗೆ ಅಡಿಪಾಯ ಎನ್ನುತ್ತಾರೆ.

ಕವಿ ಹೇಳುತ್ತಾರೆ, ಅಪಾಯದ ಬಗ್ಗೆ ತಿಳಿದಿದ್ದರೂ ಹಿಂಜರಿಯದೆ ಅದರಲ್ಲಿಯೇ ಬದುಕು ಸಾಗಿಸಿದಂತವರು ಇವರು ಮಹಾತ್ಮರುಗಳು.

ಇಂದು ಹುತಾತ್ಮರಾಗಿರುವ ಮಹಾತ್ಮರ ನೆನಪು ನಮ್ಮಲ್ಲಿ ರೂಪುಗೊಳ್ಳುತ್ತಾ ದುಷ್ಟ ದಹನಕ್ಕೆ ಮನಸ್ಸು ಸಿದ್ಧಗೊಳ್ಳಬೇಕು ಎನ್ನುತ್ತಾರೆ.

**'ಹಿರಿಯ ಚೇತನಗಳಿಗೆ'** ಕವಿತೆಯಲ್ಲಿ ಹಿಂದಿನ ಮಹಾನ್ ವ್ಯಕ್ತಿಗಳ ಕುರಿತಾಗಿ ತಿಳಿಸುತ್ತಾ ಇಂದಿನವರ ಬಗ್ಗೆ ಹೇಳುವ ಪ್ರಯತ್ನ ಕವಿ ಮಾಡಿದ್ದಾರೆ.

ಹಿರಿಯ ಚೇತನರು ಏನಿದ್ದಾರೆ, ಅವರನ್ನು ನೆನಪಿಸಿಕೊಂಡಾಗಲೆಲ್ಲಾ ನಮ್ಮಲ್ಲಿ ಹೊಸ ಬಯಕೆ ಮೂಡುತ್ತದೆ. ನಮ್ಮ ಭಾವ ಗೋಪುರವನ್ನು ಮೀರಿದಂತೆ, ಹಾಗೆ ಮುಂದುವರಿದು ಕವಿ ಹೇಳುತ್ತಾರೆ.

**ಖಂಡಿತಾ ಲೆಕ್ಕಾಚಾರದ ವ್ಯಕ್ತಿಗಳಲ್ಲ ನೀವು**
**ಅಗಣಿತ ತಾರಾಗಣದ ನಭೋವಿತಾನದಂತೆ !'**

ಎಂದು ಹೇಳುತ್ತಾರೆ.

ಹಿಂದಿನ ಮಹಾನ್ ಹಿರಿಯ ಚೇತನಗಳು ಕಾಡು ಹೂಗಳ ರೀತಿ, ಯಾವುದೋ ಬಲವಂತಕ್ಕೊ, ಇಕ್ಕಟ್ಟಿನಲ್ಲಿಯೋ ಬೆಳೆದಂತಹು ಅಲ್ಲ, ಇಚ್ಚೆಯಂತೆ ಬೆಳೆದವು. ಇಂದಿನ

ಕುಂಡದಲ್ಲಿ ಬೆಳೆಯುವ ಕಾಗದದ ಹೂಗಳಂತೆ ಅಲ್ಲ ಎನ್ನುತ್ತಾರೆ. ಅಂದರೆ ಇಲ್ಲಿ ಇಂದಿನ ಚೇತನರುಗಳು ಎಂದು ಯಾರನ್ನು ಕರೆಯುತ್ತೇವೆಯೋ ಅವರು ತಮ್ಮ ಇಚ್ಚೆಯಂತೆ ಇಲ್ಲ;

**ಕಾಡು ಹೂಗಳಾದರೂ, ನೀವೊಂದು ಜೀವಂತ ಕವಿತೆ;**
**ಆದರೆ, ಕುಂಡದಲಿ ಬೆಳೆದು ತಂದ**
**ಈಗಿನ ಕಾಗದದ ಹೂಗಳಂತು ಅಲ್ಲ;**
**ಚಂದನವ ತೇದ ಹಾಗೆ ಚಂದ !**

**(ಪು.ಸಂ.೧೯೩)**

ಮಹಾನ್ ಚೇತನಗಳು ನಮ್ಮ ಹಿರಿಯ ಚೇತನಗಳು ಎಂದು ಯಾರನ್ನು ಹೇಳುತ್ತೇವೆ . ಅವರು ಚಂದನದ ರೀತಿ, ಚಂದನವ ತೇದ ಹಾಗೆ ಚಂದ. ಹಾಗೆಯೇ ಮಹಾನ್ ಚೇತನಗಳ ಬಗ್ಗೆ ಹೆಚ್ಚು ಹೆಚ್ಚು ತಿಳಿದಷ್ಟು ಒಳಿತು ಎನ್ನುತ್ತಾರೆ.

ಮಹಾನ್ ಚೇತನಗಳು ಒಂದು ಮಾದರಿಯಾಗಿದ್ದಾರೆ. ಅವರು ನಡೆದು ಬಂದ ದಾರಿ ಉತ್ತಮವಾದುದು. ಅಂತಹ ಮಹಾನ್ ವ್ಯಕ್ತಿಗಳು ಸ್ಪೂರ್ತಿದಾಯಕವಾಗಿ ಇಂದಿನ ಜನತೆಗೆ ಮಾರ್ಗದರ್ಶಕರಾಗಿರುವುದನ್ನು ಕಾಣಬಹುದು.

ಹೀಗೆ ಶ್ರೀಸಾಮಾನ್ಯರನ್ನು ಕುರಿತಂತೆ ಅವರ ಜೀವನ ವಿಧಾನ, ಸಮಾಜದಲ್ಲಿನ ವೈವಿಧ್ಯಮಯ ಜನತೆ ಅವರು ಸಮಾಜದಲ್ಲಿ ತಮ್ಮ ಅಸ್ತಿತ್ವ ಹೊಂದಿರುವ ಬಗೆ ಮಹಾತ್ಮರುಗಳು, ಮಹಾನ್ ಚೇತನರುಗಳು, ಸ್ವಾರ್ಥಧೋರಣೆವುಳ್ಳವರು ಮುಖವಾಡ ಧರಿಸಿದ ಜನತೆ, ಮಾನವೀಯತೆ ನೆಲೆಯಲ್ಲಿನ ಧೋರಣೆ, ಇನ್ನಿತರ ಅನೇಕ ಅಂಶಗಳು ಕವಿತೆಗಳಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

**ಅಡಿಟಿಪ್ಪಣಿ:**

**೧) ರಾಗೌ ಸಮಗ್ರಕಾವ್ಯ–ವಿಜಯಲಕ್ಷ್ಮೀ ಪ್ರಕಾಶ–೨೦೧೨.**

# ಅಧ್ಯಾಯ-೫

## ರಾಗೌ ಕಾವ್ಯದ ಭಾಷೆ ಮತ್ತು ಅಭಿವ್ಯಕ್ತಿ ಸ್ವರೂಪ

ರಾಗೌ ಅವರ ಕಾವ್ಯದ ಶೈಲಿ ಸರಳವಾಗಿರುವುದನ್ನು ಕಾಣಬಹುದು. ನೇರವಾದ ಮಾತುಗಳು ಅವರ ಕವಿತೆಗಳಲ್ಲಿದೆ ವೈವಿಧ್ಯಮಯವಾಗಿ ಕೂಡಿದೆ. ಸಾನೆಟ್ಗಳನ್ನು ಬಳಸಿದ್ದಾರೆ. ಕನ್ನಡದಲ್ಲಿ ಸಾನೆಟ್ ರಚನೆ ಮಾಡಿದವರಿದ್ದರೂ ಅದನ್ನೇ ವೈವಿಧ್ಯವಾಗಿ ಪ್ರಯೋಗಿಸಿದವರು ತುಂಬಾ ವಿರಳ. ಆ ಕೀರ್ತಿ ರಾಗೌ ಅವರಿಗೆ ಸಲ್ಲುತ್ತದೆ.

ರಾಗೌ ಅವರ ಕವಿತೆಗಳು ಯಾವುದೇ ನಿರ್ದಿಷ್ಟ ಪ್ರಕಾರಕ್ಕೆ ಸೇರದಿದ್ದರೂ ಕನ್ನಡ ಕಾವ್ಯದಲ್ಲಿ ಕಾಣಿಸಿಕೊಂಡ ವಚನ, ಮುಕ್ತಕ, ಭಾವಗೀತೆ, ಚುಟುಕು ಇತ್ಯಾದಿ ಎಲ್ಲಾ ಪ್ರಕಾರಗಳಿಗೂ ಸಂಬಂಧಿಸಿದ ಆಕೃತಿಗಳು ಇಲ್ಲಿ ಒಟ್ಟುಗೂಡಿದೆ ಮನುಷ್ಯನ ಗೊಂದಲದ ಬದುಕನ್ನು ಚಿಕ್ಕ ಚಿಕ್ಕ ಆಕೃತಿಗಳಲ್ಲಿ ಬಿಡಿಸಿರುವುದು ಈ ಕವಿತೆಗಳ ಮಹತ್ವವೆನ್ನಬಹುದು.

**"ಮುಕ್ತಕ"** ತೆಪ್ಪದಲ್ಲಿನ ಒಂದು ಮುಕ್ತಕ.

**ಬರುವಾಗ ತರಲಿಲ್ಲ ಹೋಗುವಾಗ ಹೊರಲಿಲ್ಲ**
**ಬರಿದೇಕೆ ಇಲ್ಲಿ ಗೊಂದಲ ಅದಕಾನು ಇದಕಾನು**
**ತಾಮೇಲು ನೇಮೇಲು ಎಂದೆಂಬ ಕೂಗು ತರವಲ್ಲ.**[1]

**"ಹನಿಗವನ"** ಮುಖಭಾವ ಒಂದು ಹನಿಗವನ.

**ಮುಖಭಾವ ಉದ್ದೇಶರಹಿತವಲ್ಲ**
**ಅಂತರಂಗದ ಸ್ಫುರಣ.**
**ಭಿನ್ನವಿಸಲಾಗದ ಸುಪ್ತಚಿತ್ತದ**
**ಶರಧಿ ತರಣ,**
**ಕೋರಿಕೆಗೆ ಕಾರಣವಾಗುವ**
**ಕನವರಿಕೆಯ ಕಂಪನ;**
**ವಿರುದ್ಧ ಹರಿವು ವಿಕರ್ಷಣಗಳ**
**ಅತೃಪ್ತ ತಲ್ಲಣ**[2]

ಛಂದಸ್ಸು ಹಾಗೂ ಕವಿತೆಯ ಸಾಲಿನ ಮಿತಿಯಿಂದಾಗಿ ಎಲ್ಲಾ ವಿಷಯಗಳನ್ನು ಸಾನೆಟ್‌ನಲ್ಲಿ ಹೇಳುವ ಸಾಧ್ಯಾತೆಗಳು ಕಡಿಮೆ.ಇಂಥ ಸಂದರ್ಭದಲ್ಲಿ ಎಲ್ಲ ವಿಷಯಗಳನ್ನು ಸಾನೆಟ್‌ನಲ್ಲಿ ಹೇಳುವುದರ ಜೊತೆಗೆ ಅದರಲ್ಲಿ ಸಫಲರು ಆಗಿದ್ದಾರೆ. ರಾಗೌ ಅವರೇ

ಹೇಳಿಕೊಳ್ಳುವಂತೆ ಛಂದಸ್ಸಿನಲ್ಲಿ ಸಾನೆಟ್ಟಿನ ಬಂಧನವನ್ನು ಹೆಚ್ಚಿಸುವುದಕ್ಕಾಗಿ ಸ್ವಲ್ಪ ಮಾಪಾ. ಟು ಮಾಡಿಕೊಂಡಿದ್ದಾರೆ. ನಿಯತ ಅಂತ್ಯಪ್ರಾಸಕ್ಕೆ ಬದಲಾಗಿ ಅನಿಯತ ಪ್ರಾಸವನ್ನು ಜೊತೆ ಜೊತೆಗೆ ಅಲ್ಲಲ್ಲಿ ಆಂತರಿಕ ಪ್ರಾಸವನ್ನು ಬಳಸಿಕೊಂಡಿದ್ದಾರೆ.

"ಕುತು" ಎಂಬ ಕವಿತೆಯಲ್ಲಿ ಪ್ರಾಸವನ್ನು ಗಮನಿಸಬಹುದು.

**ಎಷ್ಟೊಂದು ದುಡಿದರೂ ಹೊತ್ತೊಂದು ಕೂಳಿಲ್ಲ**
**ಈ ಜನುಮ ಸಾಕು ಸಾಕ**
**ಬೆವರ ಹರಿಸಿದರು ತುಂಡರಿವೆಯೊಂದಿಲ್ಲ**
**ನಾ ಬಾಳಬೇಕು ಯಾಕ?।**

**(ಪು.ಸಂ.೨೧೩)**

ಹೀಗೆ ಪ್ರಾಸದ ನೆಲೆಯಲ್ಲಿ ಈ ಮೇಲಿನ ಕವಿತೆಯ ಸಾಲು ಕಂಡು ಬರುವುದನ್ನು ಗಮನಿಸಬಹುದು.

ರಾಗೌ ಭಾಷೆ, ಸಂಕೇತ , ಪ್ರತೀಕ ಹಾಗೂ ಅನೇಕ ಗಟ್ಟಿ ಪ್ರತಿಮೆಗಳಿಂದ ಕೂಡಿದೆ. ರಾಗೌ ಅವರು ತಮ್ಮ ಕೆಲವು ಕವಿತೆಗಳಲ್ಲಿ ಪದ್ಯ ಮತ್ತ ಗದ್ಯಗಳ ನಡುವಣ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸಿದ್ದಾರೆ. ಗದ್ಯ-ಪದ್ಯಗಳ ಗುಣಗಳು ಹಿತವಾಗಿ ಬೆರೆತಿವೆ. ಸಂಕೇತದ ದೃಷ್ಟಿಯಲ್ಲಿ ಕಾಣುವಂತದ್ದು 'ನಂಬಿಕಸ್ಥ ನಾಯಿ' ಈ ಕವಿತೆಯಲ್ಲಿ ನಾಯಿ ಪ್ರಾಣಿಯನ್ನು ಸಂಕೇತವಾಗಿ ಬಳಸಿರುವುದನ್ನು ಕಾಣಬಹುದು. ದೀರ್ಘವಾದ ಕವಿತೆಗಳನ್ನು ರಚಿಸಿದ್ದಾರೆ. ಅದಕ್ಕೆ 'ಕರಿಯ' ಇನ್ನಿತರ ಕವಿತೆಗಳನ್ನು ಉದಾ: ಯಾಗಿ ಗಮನಿಸಬಹುದು. ಹಾಗೆಯೇ ಚಿಕ್ಕ ಚಿಕ್ಕ ಕವಿತೆಗಳನ್ನು ರಚಿಸಿದ್ದಾರೆ. ಮುಕ್ತಕ, ಹನಿಗವನಗಳ ರೂಪದಲ್ಲಿ ಕಾಣಬಹುದು.

ಜನಪದ ಬದುಕಿನ ಹಿನ್ನೆಲೆಯಲ್ಲಿ ಮುಕ್ತಕಗಳು ರೂಪಗೊಂಡಿವೆ. ರಾಗೌ ಕಾವ್ಯಗಳಲ್ಲಿ ರೂಪಕಗಳು ಉಪಮೆಗಳು ಅಲಂಕಾರದ ಬಳಕೆ ನಡೆದಿದೆ – ಪ್ರತಿಮೆಗಳನ್ನು ಬಳಸಿದ್ದಾರೆ ಮುಕ್ತಗಳು ಎಂದರೆ ಚಿಕ್ಕದಾದ ಪದ್ಯಗಳು ಹಿಂದಿನ ಮತ್ತು ಮುಂದಿನ ನುಡಿಗಳಿಂದ ಅರ್ಥ ಸಂಬಂದವನ್ನು ಕಡಿದುಕೊಂಡು ಸ್ವತಂತ್ರವಾಗಿ ನಿಲ್ಲಬಲ್ಲ ಚಿಕ್ಕದಾದ ಪದ್ಯವನ್ನು ಮುಕ್ತಕ ಎಂದು ಕರೆಯುವುದುಂಟು ರಾಗೌ ಅವರ ಕವಿತೆಗಳೂ ಈ ಸೂತ್ರಕ್ಕೆ ಬದ್ದವಾಗೆಯೇ ಇವೆ ಒಟ್ಟಾರೆ ಸಮಾಜಮುಖಿಯಗಿವೆ ವಚನ-ಮುಕ್ತಕಗಳು ಇವುಗಳ ಮುಖ್ಯ ಆಶಯ ಮೌಲ್ಯ ಶೋಧನೆ ಎಂಬುದುನ್ನು ಗಮನಿಸಬಹುದು. ರಾಗೌ ನವೋದಯ ಕಾವ್ಯದ ಅಂತಃ ಸತ್ಯ ಮತ್ತು ನವ್ಯ ಕಾವ್ಯದ ಅಭಿವ್ಯಕ್ತಿ ತಂತ್ರಗಳೆರಡನ್ನೊ ಸಮೀಕರಿಸಿರುವ ಲಕ್ಷಣಗಳು ಕಾಣಿಸುತ್ತವೆ.

ಬಹುಪಾಲು ಕಾವ್ಯಾತ್ಮಕವಾದ ಧ್ವನಿಪೂರ್ಣವಾದ ಭಾಷಾಲಹರಿ ಸಹಜ ನಡೆ ಎಲ್ಲಾ ಕವಿತೆಗಳಲ್ಲೂ ಸಮಾನವಾದ ಅಂಶವೆನ್ನಬಹುದು.

"**ಮತಭ್ರಾಂತ**" ಸಾಲಂಕೃತ ಕಾವ್ಯ ಭಾಷೆಯಲ್ಲಿ ಆರಂಭವಾಗಿದೆ

**ನರರೆದೆಯೊಳಗೆ ಉರಿಯುತಿರೆ ಒಲವಿನ ಹಣತೆ**
**ಕರುಣೆಯಲ್ಲಿ ಬೆರೆತಿರಲೆಮ್ಮೊಳಗಿನ ಜೀವ**
**ಮನವದರ್ತಿಯಲ್ಲಿ ಕಣ್ಣೀರೇ ನೇಹ**

.......................................................................

**ಕಾಸಾರದೆದೆಗೆ ಕಲ್ಲೆಸೆಯುತ ಕದಡಿದೆ ಜಲವ**
**ಒಡೆದ ಕನ್ನಡಿಯೊಲು ಬಾಳಿನದಹನ**
**ಚಕಮಕಿಗೆ ಹೊತ್ತಿದೆ ಮಾರಣ ಹೋಮ**
**ಕಂಗೆಡಿಸಿದೆ ಕದನಕೆ ನಿದ್ದೆಯ ಹೂಗನಸು**
**ಬೆಚ್ಚಿದೆ ಮುಂದಿದ ಹಲವರ ಮನಸು**

-----------------------------------------------

**ಭೇದ ಪಿಶಾಚಿಗೆ ಧೂಪ ಹಾಕುತ್ತ ಬಂದರೆ**

**ನಾಳೆ ದೀಪ ನುಂಗುವ ಭೂಪನಾಗನೆ.**[೩]

ಛಂದಸ್ಸಿನ ನಿಯಮಕ್ಕಾಗಿ ಭಾವಗೀತದಲ್ಲಿ ಪಾದಗಳನ್ನು ಯದ್ವಾತದ್ವಾ ಸೀಳುವುದು ಕೃತಕ ಮತ್ತು ಅಪಚಾರವೆಂದು ನನ್ನ ಗ್ರಹಿಕೆ "ಪದ ಮತ್ತು ಅರ್ಥ ಘಟಕವನ್ನು ಒಡೆಯಬಾರದೆಂದು ನನ್ನ ಉದ್ದೇಶ ಎಂಬ ರಾಗೌ ಅವರು ಉಚಿತವಾದ ನಿರ್ಣಯಕ್ಕೆ ನನ್ನ ಸಂಪೂರ್ಣ ಸಹಮತವಿದೆ"[೪]

ಸಾನೆಟ್ ಒಂದು ಸುಂದರ ರಚನೆ . ಹತ್ತು ಉಚ್ಚಾರಾಂಶಗಳಿರುವ ಪ್ರಾಸನಿಬದ್ಧವಾದ ಹದಿನಾಲ್ಕು ಸಾಲುಗಳ ಮೋಹಕ ಶಿಲ್ಪವನ್ನು ಅದು ಹೊಂದಿದ್ದೆ "ರಾಸೆಟಿ ಹೇಳುವಂತೆ- "ಸುನೀತ ರಸಕ್ಷಣವೊಂದರ ಭಾವಶಿಲ್ಪ" ವಾಗಿದ್ದು ಯಾವ ವಿಷಯವನ್ನಾದರೂ ಅದರ ಬಂಧದಲ್ಲಿ ಹೇಳಲು ಸಾಧ್ಯವಿದೆ. ಇಂದ ಪಾರಂಪರಿಕ ಚೌಕಟಿನಲ್ಲಿಯೇ ರಾಗೌ ಅವರ ಸಾನೆಟ್‌ಗಳು ರಚನೆಯಾಗಿದ್ದಾಗ್ಯೂ ವಸ್ತುವಿನ ದೃಷ್ಟಿಯಿಂದ ಗಂಭೀರ ಸ್ವರೂಪದ್ದಾಗಿ ಕಂಡುಬರುತ್ತದೆ.[೫]

ಅಗಾಧ ಅನುಭವ ಬಾಷೆಯ ಮೇಲಿನ ಅಸಾಧಾರಣ ಹಿಡಿತ ಹಾಗೂ ಎಲ್ಲಕ್ಕಿಂತ ಮಿಗಿಲಾಗಿ ಸಂಗತಿಗಳಲ್ಲಿ ಸಾದೃಶ್ಯ ಕಾಣುವ ಪ್ರತಿಭಾ ಶಕ್ತಿ ಇವುಗಳು ಮುಕ್ತಕಗಳನ್ನು ಯಶಸ್ವಿಯಾಗಿ ನಿಭಾಯಿಸಬಹುದು.

ರಾಗೌ ಅವರ ಒಟ್ಟು ಕಾವ್ಯ ಆಕೃತಿ ದೃಷ್ಟಿಯಿಂದ ವಸ್ತು ವೈವಿದ್ಯಯಿಂದ ದೃಷ್ಟಿಯಿಂದ ಕ್ಲಿಷ್ಟ ಮತ್ತು ಜನಪದ ಭಾಷೆ ಲಯಗಳ ದೃಷ್ಟಿಯಿಂದ ಸಂಕೇತ– ಪ್ರತಿಮೆ– ದೃಷ್ಟಾಂತಗಳ ದೃಷ್ಟಿಯಿದ ವ್ಯಾಪಕವಾದ ಅಧ್ಯಯವನ್ನು ಬಯಸುತ್ತದೆ. ಗಾದೆಯ ರೂಪದಲ್ಲಿ ನುಡಿಮುತ್ತಿನ ರೂಫದಲ್ಲಿ ಕಾವ್ಯಮಯವಾದಂತ ಸಾಲುಗಳು ಕಾವ್ಯದಲ್ಲಿವೆ.

ಭಾಷೆಗೆ ರಾಗೌ ತುಂಬುವ ಬನಿ ಮತ್ತು ನವೋದಯ ಕವಿಗಳನ್ನು ನೆನಪಿಸುವಂತಹ ಪದ ಪ್ರಯೋಗ ಈ ಬಗೆಯ ಲಯದ ಪೋಷಣೆಗೆ ಪೂರಕವಾಗಿದೆ. ಮುಕ್ತಕಗಳು, ಹನಿಗವಿತೆಗಳು, ಸುನೀತಗಳು ರಾಗೌ ಅವರ ಸ್ವೋಪಜ್ಞೆಯನ್ನು ಪ್ರತ್ಯೇಕಿಸಿ ತೋರಿಸುತ್ತದೆ. ವಚನ, ಮುಕ್ತಕ, ಭಾವಗೀತೆ, ಚುಟುಕು ಇತ್ಯಾದಿ ಎಲ್ಲಾ ಪ್ರಕರಗಳಿಗೂ ಸಂಬಂಧಿಸಿದ ಆಕೃತಿಗಳು ಇಲ್ಲಿ ಒಟ್ಟುಗೂಡಿವೆ.

ಅಭಿವ್ಯಕ್ತಿಯನ್ನು ನೀಡುವಾಗ ತಮ್ಮ ಕವಿತೆಗಳಿಗೆ ರಾಗೌ ನೀಡುವ ರೂಪ ಮತ್ತು ಭಾಷೆಯನ್ನು ಬಳಸುವ ವಿಧಾನ ಕೂಡ ಗಮನಿಸಬಹುದು. ಕೆಲವು ಕವಿತೆಗಳ ಪಂಕ್ತಿಗಳ ಜೋಡಣೆ ಮತ್ತು ಮಾತ್ರಾಲಯಗಳ ವಿನ್ಯಾಸದಿಂದ ಹಾಡುಗಳು ಎನ್ನುವಷ್ಟು ದಟ್ಟವಾದ ಗೇಯಗುಣವನ್ನು ಹೊಂದಿವೆ.

ಈ ಹಿನ್ನೆಲೆಯಲ್ಲಿ **'ಮುಳುಗು ಮನವೆ',** ಕವಿತೆ ಗಮನಿಸಬಹುದು.

**ಮುಳುಗು ಮನವೆ ಮುಳುಗು ಮನವೆ**
**ಕಡಲ ಆಳಕೆ**
**ರತ್ನ ಸಿರಿಯ ಹುಡುಕಿ ತರಲು**
**ಮುಳುಗು ಆಳಕೆ**
**ದೇಹ ಗಣಿಯು ಆತ್ಮ ಮಣಿಯು**
**ನಿತ್ಯ ನೂತನ**
**ಅದುವೆ ಗುರುತಮೋ ಹಾರಿ**
**ದಿವ್ಯ ಚೇತನ**

**(ಪು.ಸಂ.೫೧)**

ರಾಗೌ ತಮ್ಮ ಕಾವ್ಯದಲ್ಲಿ ಸರಳ ಭಾಷೆ ಬಳಸಿದ್ದಾರೆ. ಸಹವಾದ ಭಾವಾಭಿವ್ಯಕ್ತಿ ಗಮನಿಸಬಹುದು. ಕವಿತೆಗಳು ವಸ್ತುವಿಗೆ ತಕ್ಕಂತಹ ರೂಪವನ್ನು ಧರಿಸಿದೆ. ವಸ್ತು ಮತ್ತು ಅಭಿವ್ಯಕ್ತಿಯ ನಡುವೆ ಸಹಜ ಹಾಗೂ ಸುಂದರ ಹೊಂದಾಣಿಕೆ ಸಾಧ್ಯವಾಗಿದೆ. ಕವಿ ಭಾವ ಸರಳ ಹಾಗೂ ಸಹಜ ಹಾಡಾಗಿ ಹರಿದಿದೆ. ಭಾವಾಭಿವ್ಯಕ್ತಿಗಾಗಿ ಭಾಷೆ ತಡಕಾಡಿದಂತೆ

ಕಾಣುವುದಿಲ್ಲ. ಹೀಗೆ ಉತ್ತಮ ರೀತಿಯಲ್ಲಿ ಕಾವ್ಯದ ಭಾಷೆ ಹಾಗೂ ಅಭಿವ್ಯಕ್ತಿಯ ನೆಲೆ ರಾಗೌ ಕಾವ್ಯಗಳಲ್ಲಿ ಕಾಣಬಹುದು.

**ಅಡಿಟಿಪ್ಪಣಿ:**

೧.ತೆಪ್ಪ–ಪು.ಸಂ–೧೦೩ ರಾಗೌ ಸಮಗ್ರ ಕಾವ್ಯ–ವಿಜಯಲಕ್ಷ್ಮೀ ಪ್ರಕಾಶನ–ಮೈಸೂರು ೨೦೧೨.
೨. ರಾಗೌ ಸಮಗ್ರ ಕಾವ್ಯ ಪುಟ–೫೭೫–ವಿಜಯಲಕ್ಷ್ಮೀ ಪ್ರಕಾಶನ–ಮೈಸೂರು.
೩. ರಾಗೌ ಕಾವ್ಯ ವಿಮರ್ಶೆ – ಡಾ॥ ಬೆಳ್ಳೂರು ವೆಂಕಟಪ್ಪ, ಪುಟಸಂಖ್ಯೆ–೮೪–ಡಾ॥ ಎಂ.ಬೈರೇಗೌಡ, ಪ್ರಗತಿ ಗ್ರಾಫಿಕ್ಸ್ ಬೆಂಗಳೂರು–೨೦೦೯.
೪. ರಾಗೌ ಕಾವ್ಯ ವಿಮರ್ಶೆ – ಡಾ॥ ಬೆಳ್ಳೂರು ವೆಂಕಟಪ್ಪ, ಪುಟಸಂಖ್ಯೆ–೮೯–ಡಾ॥ ಎಂ.ಬೈರೇಗೌಡ, ಪ್ರಗತಿ ಗ್ರಾಫಿಕ್ಸ್ , ಬೆಂಗಳೂರು–೨೦೦೯.
೫. ರಾಗೌ ಕಾವ್ಯ ವಿಮರ್ಶೆ – ಡಾ॥ ಬೆಳ್ಳೂರು ವೆಂಕಟಪ್ಪ, ಪುಟಸಂಖ್ಯೆ–೧೧೯–ಡಾ॥ ಎಂ.ಬೈರೇಗೌಡ, ಪ್ರಗತಿ ಗ್ರಾಫಿಕ್ಸ್ , ಬೆಂಗಳೂರು–೨೦೦೯.
೬. ರಾಗೌ ಸಮಗ್ರ ಕಾವ್ಯ–ಪುಟ ಸಂಖ್ಯೆ–೫೧–ವಿಜಯಲಕ್ಷ್ಮೀ ಪ್ರಕಾಶನ–ಮೈಸೂರು ೨೦೧೨.

# ಸಮಾರೋಪ

ಡಾ ರಾಗೌ ಅವರ ಕಾವ್ಯಗಳಲ್ಲಿ ಸಾಮಾಜಿಕ ಚಿಂತನೆ ಎಂಬ ವಿಷಯದಲ್ಲಿ ಸಾಮಾಜಿಕ ನೆಲೆಯಲ್ಲಿ ಕಂಡುಬರುವ ಅಂಶಗಳಾದ ರಾಜಕೀಯ, ಜಾತಿ, ಮತ, ಮಹಿಳೆ(ಸ್ತ್ರೀ) ಮತ್ತು ಶ್ರೀಸಾಮಾನ್ಯನ ನೆಲೆ ಇವು ಹೇಗೆ ಮೂಡಿಬಂದಿದೆ ಎಂದು ವಿಶ್ಲೇಷಣೆ ಮಾಡಲಾಗಿದೆ.

ಯಾವುದೇ ಪಂಥ. ಸಿದ್ಧಾಂತ, ವಾದ ತತ್ವಗಳಿಗೆ ಅಂಟಿಕೊಳ್ಳದೆ ಎಲ್ಲೆಲ್ಲಿ ಒಳ್ಳೆಯ ಅಂಶಗಳಿವೆಯೋ ಅವು ಎಲ್ಲೆಲ್ಲಿ ಹರಡಿದೆಯೋ ಅದನ್ನೆಲ್ಲ ಕಾವ್ಯವಾಗಿಸುತ್ತಾ ಬಂದಿದ್ದಾರೆ. ತಾವು ಕಂಡಂತಹ ಸ್ವ ಅನುಭವಗಳನ್ನು ರಾಗೌ ಕಾವ್ಯಗಳಲ್ಲಿ ಚಿಂತಿಸಿದ್ದಾರೆ. ಅನೇಕ ಸಮಸ್ಯೆಗಳು ಕೆಟ್ಟ ಧೋರಣೆಗಳ ಬಗ್ಗೆ ಮರುಕ ವ್ಯಕ್ತಪಡಿಸಿದ್ದಾರೆ. ಕೆಲವೊಂದು ಸಮಸ್ಯೆಗಳನ್ನು ಕುರಿತು ಖಂಡಿಸಿದ್ದಾರೆ. ಈ ಎಲ್ಲಾ ಅಂಶಗಳು ಕಾವ್ಯದ ವಸ್ತುಗಳಾಗಿವೆ ಜೀವನದಲ್ಲಿ ತಮಗಾದ ಅನುಭವ ಕಷ್ಟ-ಸುಖಗಳು, ಸಮಾಜದ ವೈಚಿತ್ರಗಳು ಎಲ್ಲವನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಿಸಿ ಕನ್ನಡ ಸಾಹಿತ್ಯಕ್ಕೆ ಉತ್ಕೃಷ್ಟ ಕವನಗಳನ್ನು ನೀಡುತ್ತಿದ್ದಾರೆ. ಸಮಾಜದ ನೆಲೆಯಲ್ಲಿ ಕಂಡುಬರುವ ವಸ್ತುಗಳೆಲ್ಲವನ್ನು ತಮ್ಮದೇ ಆದ ವಿಭಿನ್ನ ವಿಶಿಷ್ಟ ದೃಷ್ಟಿಕೋನಗಳಿಂದ ನೋಡಿ ಅವುಗಳ ಕುರಿತಾಗಿ ತಮ್ಮದೇ ನಿಲುವನ್ನು ವ್ಯಕ್ತಪಡಿಸುತ್ತಾರೆ ಹಾಗೂ ಮಹಾತ್ಮರುಗಳ ಕುರಿತಾಗಿ ಅವರ ಬಗೆಗಿನ ಆದರ್ಶ ಜೀವನದ ಸಲಹೆ ನೀಡುತ್ತಾ ಹಿರಿಯ ಸಾಹಿತಿಗಳಿಂದ ಹಿರಿಯ ಚೇತನಗಳಾದ ಮಹಾನ್ ವ್ಯಕ್ತಿಗಳಿಂದ ಪ್ರೇರಣೆಗೊಂಡು ಹೊಸ ಹೊಸ ಚಿಂತನೆಗಳನ್ನು ಮೂಡಿಸಿರುವುದನ್ನು ಈ ಅಧ್ಯಯನದಲ್ಲಿ ಅನಾವರಣಗೊಳಿಸಲಾಗಿದೆ.

ರಾಗೌ ಅವರ ಕಾವ್ಯಗಳಲ್ಲಿ ವಸ್ತು ವೈವಿಧ್ಯತೆ ಇದೆ. ಪ್ರಕೃತಿ ಜೀವನ, ತಾತ್ವಿಕತೆ, ಸಮಾಜ, ನಾಡು-ನುಡಿ, ವ್ಯಕ್ತಿಚಿತ್ರಣ, ವಿಜ್ಞಾನ, ತಂತ್ರಜ್ಞಾನ, ಧರ್ಮ, ಸಾಹಿತ್ಯ, ಇತಿಹಾಸ, ಇನ್ನೂ ಮೊದಲಾದ ವಿಚಾರಗಳನ್ನು ಕುರಿತು ಕಾವ್ಯ ರಚಿಸಿದ್ದಾರೆ. ಈ ನಿಬಂಧದಲ್ಲಿ ಮುಖ್ಯವಾಗಿ ಸಾಮಾಜಿಕ ಚಿಂತನೆ ಎಂಬುದು ಕೇಂದ್ರ ವಿಷಯವಾಗಿದ್ದು ಅದರಲ್ಲಿನ ರಾಜಕೀಯ ಜಾತಿ,ಮತ,ಮಹಿಳೆ(ಸ್ತ್ರೀ) , ಶ್ರೀಸಾಮಾನ್ಯ ಈ ವಿಷಯಗಳಿಗೆ ಸಂಬಂಧಪಟ್ಟ ವಿಚಾರಗಳನ್ನು ಮಾತ್ರ ಗಮನಿಸಲಾಗಿದೆ.

ಸಮಾಜದಲ್ಲಿ ಬದುಕುತ್ತಿರುವ ಸಾಹಿತಿ ಆಯಾ ಸಮಾಜದ ಒಂದು ಭಾಗವೇ ಆಗಿದ್ದು ಅಲ್ಲಿನ ಸ್ಥಿತಿಗಳು ಆತನ ಅನುಭವದ ಪ್ರತ್ಯೇಕ ಅನುಭವಗಳಾಗಿವೆ. ಸಮಾಜದೊಂದಿಗೆ ಮನುಷ್ಯನ ಸಂಬಂಧ ನಿಕಟವಾದುದು. ಅದನ್ನು ಬಿಟ್ಟು ಮನುಷ್ಯ ಇಲ್ಲ. ಅಂತ ಸಮಾಜವನ್ನು ರಾಗೌ

ಅವರು ತಮ್ಮದೇ ನೆಲೆಯಲ್ಲಿ ನೋಡಿದ್ದಾರೆ. ಅಲ್ಲಿನ ಸಾಮಾಜಿಕ ಚಿಂತನೆಯ ಸಮಾಜದಲ್ಲಿ ಚರ್ಚಿತವಾಗುವ ವಸ್ತು ವಿಷಯಗಳೆಲ್ಲವೂ ಕಾವ್ಯವಾಗಿದೆ. ಪ್ರಕೃತಿ–ಮನುಷ್ಯ, ಮನುಷ್ಯ–ಸಮಾಜ, ಇವುಗಳ ಪರಸ್ಪರ ಪೂರಕ ಸಂಬಂಧವು ಅವರ ಕವಿತೆಗಳಲ್ಲಿ ಕಾಣಿಸಿಕೊಂಡಿರುವುದನ್ನು ಈ ಅಧ್ಯಾಯದಲ್ಲಿ ತಿಳಿಯಬಹುದು.

ರಾಜಕೀಯ ವ್ಯವಸ್ಥೆಯಲ್ಲಿ ಇಂದಿನ ಹವಗೆಟ್ಟ ಪರಿಸ್ಥಿತಿ ಅಧಿಕಾರದ ಕೆಟ್ಟ ಧೋರಣೆ. ಸರ್ವಾಧಿಕಾರಿ ಧೋರಣೆ , ಅನ್ಯಾಯ ಅಕ್ರಮವೆಸಗಿ ಜನರನ್ನು ವಂಚಿಸುವ ಮಂದಿ ಹೀಗೆ ಎಲ್ಲವುಗಳ ಚಿತ್ರಣವನ್ನು ಉತ್ತಮವಾಗಿ ನೀಡಿದ್ದು, ವಿಭಿನ್ನ ರೀತಿಯಲ್ಲಿ ಮೂಡಿಬಂದಿದೆ. ರಾಜಕೀಯದಲ್ಲಿನ ಕೆಟ್ಟ ವ್ಯವಸ್ಥೆಯನ್ನು ತಿಳಿಸುವುದರೊಂದಿಗೆ ಸಮಾಜದ ಜನತೆಗೆ ಎಚ್ಚರಿಕೆ ವಹಿಸಬೇಕೆಂಬ ಜಾಗೃತಿ ಮೂಡಿಸಿದ್ದಾರೆ. ಉತ್ತಮ ಸಮಾಜಕ್ಕೆ ಉತ್ತಮ ರಾಜಕೀಯ ಬೆಳೆಸಬೇಕೆಂಬ ಎಚ್ಚರವೂ ಸಹ ಕವಿತೆಗಳಲ್ಲಿರುವುದನ್ನು ಗುರುತಿಸಲಾಗಿದೆ.

ಸಾಮಾಜಿಕ ಕವಿತೆಗಳು ಮುಖ್ಯವಾಗಿ ಜಾತಿ–ಮತ ಸಂಬಂಧಿಸಿದಂತೆಯೂ ಕಂಡು ಬರುತ್ತವೆ. ಜಾತಿ ಎಂಬ ಕೆಟ್ಟ ವ್ಯವಸ್ಥೆಯ ಕುರಿತಾಗಿ ತಿಳಿಸಿದೆ. ಜಾತಿ ವ್ಯವಸ್ಥೆಯಿಂದ ಸಮಾಜದ ಉಳಿವು ಸಾಧ್ಯವಿಲ್ಲ. ಸಮಾಜವನ್ನು ಅಧಃ ಪತನಕ್ಕೆ ತಳ್ಳುವ ಒಂದು ಅಮಾನುಷ ವ್ಯವಸ್ಥೆ ಎನ್ನುತ್ತಾರೆ. ಜಾತಿ ನೆಲೆಯಲ್ಲಿನ ಅನೇಕ ಅಂಶಗಳಾದ ಜಾತಿ ತಾರತಮ್ಯತೆ, ಜಾತಿಯ ಬಿಗಿ ಕಟ್ಟುಪಾಡುಗಳು, ವರ್ಗ, ವರ್ಣ. ಸಂಘರ್ಷಗಳು, ಕಟ್ಟುನಿಟ್ಟಿನ ಸಂಪ್ರದಾಯ ಪದ್ದತಿಗಳು, ಜಾತಿ ನೆಲೆಯಲ್ಲಿ ಸಮಾಜದಲ್ಲಿನ ಜನತೆಯನ್ನು ತೀರಾ ನಿಕೃಷ್ಟವಾಗಿ ಕಾಣುವುದು. ಮತಭ್ರಾಂತತೆ, ಅಮಾನವೀಯತೆ, ಈ ಎಲ್ಲಾ ಅಂಶಗಳು ರಾಗೌ ಅವರ ಕಾವ್ಯಗಳಲ್ಲಿ ವ್ಯಕ್ತವಾಗಿದೆ. ಇವುಗಳೆಲ್ಲವೂ ಜಾತಿ–ಮತ ಸಂಬಂಧಿ ಕವಿತೆಗಳು ಶೀರ್ಷಿಕೆಯಡಿ ಅನಾವರಣಗೊಂಡಿವೆ.

ಸಮಾಜವು ಒಳಗೊಂಡಿರುವ ಮತ್ತೊಂದು ಪ್ರಮುಖ ನೆಲೆ ಮಹಿಳೆಯರಿಗೆ ಸಂಬಂಧಿಸಿದುದಾಗಿದೆ. ಇವರನ್ನು ಕುರಿತಂತೆ ಕವಿಯ ಮನೋಧೋರಣೆಗಳು ಕಾವ್ಯಗಳಲ್ಲಿ ವಿಭಿನ್ನ, ವಿಶಿಷ್ಟ ರೀತಿಯಲ್ಲಿ ಕಂಡು ಬಂದಿದೆ. ಉತ್ತಮ ಸಮಾಜ ನಿರ್ಮಾಣಕ್ಕೆ ಮಹಿಳಾ ಸ್ಥಿತಿಗತಿ ಸುಧಾರಿಸಬೇಕೆಂಬ ಭಾವ ಕಾವ್ಯಗಳಲ್ಲಡಗಿದೆ. ಮಹಿಳೆಯರನ್ನು ಕೀಳಾಗಿ ಕಾಣುವ ಪುರುಷ ಸಮಾಜ, ಪುರುಷನ ದಬ್ಬಾಳಿಕೆ, ಹೆಣ್ಣಿಗೆ ಗೌರವ ನೀಡದ ಸಮಾಜ, ಮಹಿಳ ಅಸಮಾನತೆ, ಲಿಂಗತರತಮ್ಯತೆ, ಶೋಷಣೆಗೆ ಒಳಗಾದ ಸ್ತ್ರೀ, ಮಹಾನ್ ಸಾಧನೆ ಮಾಡಿದ ಮಹಾ ಮಹಿಳೆಯರ ಕುರಿತಾಗಿ ತಿಳಿಸಿರುವುದನ್ನು ಕಾಣಬಹುದು.

ಸಮಕಾಲೀನ ಸಮಾಜದ ಸರ್ವಮುಖಗಳನ್ನು ಮುಕ್ತಮನಸ್ಸಿನಿಂದ ನೋಡುವಾಗ ಕವಿಯ ಕಣ್ಣೆದುರು ನಿಲ್ಲುವುದು ಸಂತಸದ ಕ್ಷಣಗಳಲ್ಲ, ಸಂಕಟದ ಹಾಗೂ ತಳಮಳದ ಕ್ಷಣಗಳು. ಬದುಕಿನ ವಿವಿಧ ಮುಖಗಳ ಚಿಂತನ ಕ್ರಮ ರೂಪುಗೊಂಡಿರುವ ಬಗೆಯ ಅಭಿವ್ಯಕ್ತಿಯ ಜೊತೆ ಜೊತೆಯಲ್ಲೇ ಆವೇಶಗೊಳ್ಳಬಹುದಾದ ಸಂದರ್ಭದಲ್ಲೂ ಸಮಾಧಾನ ನೆಲೆಗೆ ಒಂದು ಆಶಾವಾದದ ನೆಲೆಯನ್ನು ತಲುಪುವ ಸಂದರ್ಭಗಳೂ ಇವೆ.

ಸಾಮಾಜಿಕ ಕವಿತೆಗಳಲೆಲ್ಲ ಮುಖ್ಯವಾಗಿ ಸಮಾಜ ಮತ್ತು ಮನುಷ್ಯನ ಸಂಬಂಧ, ಸಮಾಜಕ್ಕಾಗಿ ಮನುಷ್ಯನ ಬದುಕಬೇಕೆಂಬ ಧೋರಣೆ ಇರುವುದನ್ನು ಕಾಣುತ್ತೇವೆ. ಜೊತೆಗೆ ಮನುಷ್ಯನ ಸ್ವಾರ್ಥ, ಅಹಂಕಾರ, ಶೋಷಣೆ. ಅನ್ಯಾಯ ಎಲ್ಲಾವು ಹೇಗೆ ಸಮಾಜ ವಿರೋಧಿಯಾಗಿ ಮನುಷ್ಯನ ಜೀವನದ ನಾಶಕ್ಕೆ ಕಾರಣವಾಗುತ್ತವೆ ಎಂಬುದನ್ನು ತಿಳಿಯಬಹುದು.

ಮೂಲ ಸೌಕರ್ಯದಿಂದ ವಂಚಿತವಾಗಿರುವ ಸಮಾಜದ ಸಾಮಾನ್ಯ ಜನರ ಬವಣೆ, ಅಧಿಕಾರ ಬಲ, ಮತ್ತು ಹಣ ಬಲದಿಂದ ಮರೆಯುತ್ತ, ಮೇಲೆ ಬಂದವರನ್ನು ತುಳಿಯುತ್ತಿರುವ ಭಸ್ಮಾಸುರತನ, ಸಮಾಜದಲ್ಲಿ ಒಂದಾಗಿ ಸೌಹರ್ತೆಯಿಂದ ಕೂಡಿ ಬಾಳಬೇಕಾಗಿದ್ದು ಮನುಷ್ಯ ಕಲಹದಲ್ಲಿ ನಿರತನಾಗಿದ್ದು ತನಗೆ ತಾನೇ ಹಾನಿ ಮಾಡಿಕೊಳುತ್ತಿರುವುದು ಅಧಿಕಾರ ಮತ್ತು ಕುರ್ಚಿಯ ಮೇಲಿನ ಮೋಹ, ಸಂಸ್ಕೃತಿಯ ಅದಃ ಪತನ ಇವೆಲ್ಲ ಅಂಶಗಳು ಸಾಮಾಜಿಕ ಕವಿತೆಗಳಾಗಿ ಅನಾವರಣಗೊಂಡಿವೆ.

ಒಟ್ಟಾರೆಯಾಗಿ ರಾಗೌ ಅವರ ಕವಿತೆಗಳು ನಮ್ಮ ಸುತ್ತಲಿನ ಎಲ್ಲಾ ವಿಚಾರಗಳನ್ನು ಬಿತ್ತರಿಸುವ ಪ್ರತಿನಿಧಿಗಳಂತಿದ್ದು ಅವುಗಳ ಅರಿವಿನಿಂದ ಬದಲಾವಣೆಯ ಪಥದಲ್ಲಿ ಸಾಗುವ ಕೆಲಸ ಮಾಡಬೇಕಾಗಿದೆ.

ಸಾಮಾಜಿಕವಾಗಿ ಕಾಳಜಿ ಹುಟ್ಟಿಸುವ ಮೂಲಕ ಸಾಮಾಜಿಕ ಚಿಂತನೆಯ ಹಿನ್ನೆಲೆಯಲ್ಲಿ ರಾಗೌ ಕಾವ್ಯಗಳನ್ನು ರಚಿಸಿಸಿದ್ದಾರೆನ್ನಬಹುದು. ಎಲ್ಲಾ ಕಾವ್ಯಾಸಕ್ತರು ಓದಿ ತಿಳಿಯಬೇಕಾದ ವಿಷಯಗಳು ರಾಗೌರವರ ಕಾವ್ಯದಲ್ಲಿ ಕಾಣಬಹುದು. ಒಟ್ಟಾರೆಸಮಾಜದ ಚಿತ್ರಣವನ್ನು ತಮ್ಮ ಕಾವ್ಯಗಳ ಮೂಲಕ ತಿಳಿಯಪಡಿಸುತ್ತಾ ಸಮಾಜದ ದಾರಿದೀಪಗಳಾಗಿ ಅವರ ಕಾವ್ಯಗಳು ಪ್ರಮುಖ ಪಾತ್ರವಹಿಸುತ್ತವೆ. ಬೆಳೆಯುತ್ತಿವೆ.

ರಾಗೌ ಕ..ತೆಗಳ ವಸ್ತು ಅಧ್ಯಯನಕ್ಕೆ ಯೋಗ್ಯವಾದುದ.ನ್ನ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಇವರ ಸಾಮಾಜಿಕ ಚಿಂತನೆಗಳು ಶ್ರೀ ಸಾಮಾನ್ಯದ ಪರವಾಗಿರುವ ಧೋರಣೆ, ಸ್ತ್ರೀಯ ಬಗೆಗಿರುವ ಗೌರವ ಮತ್ತು ಈ ಸಮುದಾಯದ ದುಃಖ ಸಂಕಟಗಳು ನಿವಾರಣೆಯಾಗಬೇಕೆಂಬುದು ಇವರ ಕವಿತೆಗಳ ಮುಖ್ಯ ಆಶಯವಾಗಿರುವುದನ್ನು ಕಾಣುತ್ತೇವೆ. ಈ ಎಲ್ಲಾ ಹಿನ್ನೆಲೆಯಲ್ಲಿ ರಾಗೌ ಕಾವ್ಯ ಆಧುನಿಕ ಕನ್ನಡ ಸಾಹಿತ್ಯದ ಮಹತ್ವದ ಕಾವ್ಯವಾಗಿರುವುದಾಗಿದೆ ಎಂದು ಹೇಳಬಹುದು.

# ಗ್ರಂಥಋಣ

**ಅನುಬಂಧ–೧**

**ಆಕರ ಗ್ರಂಥಗಳು**

೧. ಡಾ.ರಾಗೌ ಸಮಗ್ರ ಕಾವ್ಯ– ವಿಜಯಲಕ್ಷ್ಮೀ ಪ್ರಕಾಶನ –ಮೈಸೂರು. ೨೦೧೨

**ಅನುಬಂಧ–೨**

೧. **ಅಭಿಜಾತ** : ರಾಗೌ ಅಭಿನಂದನಾಗ್ರಂಥ– ಸಂಪಾದಕರು ಕ್ಯಾತನಹಳ್ಳಿ ರಾಮಣ್ಣ, ಡಾ.ಎ. ರಂಗಸ್ವಾಮಿ, ಡಾ. ಬೋರೇಗೌಡ, ಚಿಕ್ಕಮರಳಿ–ರೂಪಾ ಪ್ರಕಾಶನ–ಮೈಸೂರು. ೨೦೧೨

೨. **ರಾಗೌ ಕಾವ್ಯ ವಿಮರ್ಶೆ**–ಡಾ.ಬೆಳ್ಳೂರು ವೆಂಕಟಪ್ಪ–ಡಾ.ಎಂ.–ಬೈರೇಗೌಡ ಪ್ರಗತಿ ಗ್ರಾಫಿಕ್ಸ್–ಬೆಂಗಳೂರು. ೨೦೦೯

೩. **ಡಾ.ರಾಗೌ ವ್ಯಕ್ತಿ–ಅಭಿವ್ಯಕ್ತಿ**–ಡಾ. ಬೋರೇಗೌಡ ಚಿಕ್ಕಮರಳಿ–ಅವಿನಾಶ್ ಪ್ರಕಾಶನ, ಮಂಡ್ಯ. ೨೦೦೯

೪. **ಹೊಸಗನ್ನಡ ಸಾಹಿತ್ಯ ಚರಿತ್ರೆ**–ಪ್ರೊ. ಎಲ್. ಎಸ್. ಶೇಷಗಿರಿರಾವ್–ಅಂಕಿತ ಪುಸ್ತಕ ಬೆಂಗಳೂರು. ೨೦೦೬

೫. **ಕನ್ನಡದ ಹಾಡು ಪಾಡು**–ಡಾ॥ ಕೆ.ಸಿ.ಶಿವಾರೆಡ್ಡಿ–ಅಧ್ಯಯನ ಮಂಡಲ. ೨೦೦೩

೬. **ಸೌಂದರ್ಯ ಸಮೀಕ್ಷೆ**– ಜಿ.ಎಸ್.ಎಸ್. ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ. ೧೯೬೫

೭. **ಶಕ್ತಿ ಶಾರದೆಯ ಮೇಳ** –ಡಿ.ಆರ್. ನಾಗರಾಜ್–ಅಕ್ಷರ ಪ್ರಕಾಶನ ಹೆಗ್ಗೋಡು. ೨೦೦೮

೮. **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ**–ಕೀರ್ತಿನಾಥ ಕುರ್ತಕೋಟಿ ಕುರ್ತಕೋಟಿ ಮೆಮೊರಿಯಲ್ ಟ್ರಸ್ಟ್ ೨೦೦೭